

# ಅಮೃತ ಸ್ವತಂತ್ರಾ:

## ದೈವಸಾಕ್ಷಾತ್ಕಾರ ಎಲ್ಲರ ಆ ಜನ್ಮ ಸಿದ್ಧಹಕ್ಕು

**Dr.** ಎಸ್. ಆರ್. ಸಿದ್ಧಲಿಂಗಪ್ಪ

'ಇಷ್ಟಲಿಂಗ ತತ್ತ್ವ'

ಒಂದು

ವಿವೇಚನ

**2006**

**Institute of Veerashaiva and Contemporary**

**Studies**

**Bangalore.**

'ಇಷ್ಟಲಿಂಗ'ತತ್ತ್ವ'

ಡಾ॥ ಎಸ್.ಆರ್. ಸಿದ್ದಲಿಂಗಪ್ಪ

ಪ್ರಧಾನ ಕಾರ್ಯದರ್ಶಿ. **I.O.V. & C. S.**

ಬೆಂಗಳೂರು–72.

1) ಹಿನ್ನೆಲೆಗಳು:- ಬಿ.ಹೆಚ್.ಇ.ಎಸ್. ಬಸವ ಕಲ್ಯಾಣ ಸಮಿತಿ (ರಿ.) ಇವರು ಕೊಟ್ಟಿರುವ ಪ್ರಬಂಧದ ವಿಚಾರವನ್ನು ಯಥಾವತ್ತಾಗಿ ನಿರೂಪಿಸಿ, ತದನಂತರದಲ್ಲಿ ಆ ನಿರೂಪಣೆಗೆ ಸಾಧಾರವಾಗಿ ಪ್ರತಿಪಾದನೆಗಳನ್ನು ಮಾಡಲಾಗುತ್ತದೆ.

"ಲಿಂಗಪೂಜೆ" ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಲಿಂಗತತ್ತ್ವವು ವೀರಶೈವ ಇಷ್ಟಲಿಂಗ ಕಲ್ಪನೆಯಲ್ಲಿ ಪರಿಪೂರ್ಣತೆಯನ್ನು ಪಡೆದಿದೆಯೆಂದು ಬಹಳಷ್ಟು ದಾರ್ಶನಿಕರು, ತತ್ತ್ವಜ್ಞಾನಿಗಳು, ಪಂಡಿತರು, ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇಷ್ಟಲಿಂಗ ತತ್ತ್ವವು ಸ್ಥಾವರ ಲಿಂಗ ತತ್ತ್ವವನ್ನು ಗರ್ಭೀಕರಿಸಿಕೊಂಡು ಇಷ್ಟಲಿಂಗ ತತ್ತ್ವವನ್ನು ವಿಕಸಿದಿದೆಯೆ?

ಕೆಲ ವಿದ್ವಾಂಸರ ಪ್ರಕಾರ ಇಷ್ಟಲಿಂಗದ ಮೇಲ್ಮೈ ಆದ ಕಂಥೇ (ಕಂಥಾ ವಸ್ತ್ರ ಅಥವಾ ಬಟ್ಟೆ – ಮೇಲೊದಿಸುವ ಬಟ್ಟೆ ಎಂಬರ್ಥದಲ್ಲಿ)ಯನ್ನು ಕಳೆದು ತೆಗೆದರೆ ಒಳಗಡೆ ಇರುವಂತಹ ಲಿಂಗ ಅದು ಸ್ಥಾವರಲಿಂಗವೆ. ಅದು ಪುಟ್ಟಲಿಂಗ. ಇದನ್ನು ಮಗುವಿಗೆ ನಾಮಕರಣ ಮಾಡುವಾಗಲೇ ಕಟ್ಟಿಸಲಾಗುತ್ತದೆ. ಆದರೆ ಅದನ್ನು ಮೈ ಮೇಲೆ ಧರಿಸುವಾಗ ಅನುಕೂಲತೆ (ಅಂದರೆ ಅದು ಅಂಗೈಯಲ್ಲಿ ಸರಿಯಾಗಿ ನಿಲ್ಲುತ) ದೃಷ್ಟಿಯಿಂದ ಅದಕ್ಕೆ ಕಪ್ಪು ಕಂಥೆ ತೊಡಿಸಲಾಗುತ್ತದೆಯೇ ಹೊರತು ವಿಶೇಷತೆಯೇನೂ ಇಲ್ಲ. ಆದರೆ, ಪ್ರಶ್ನೆಯೆಂದರೆ ಇಷ್ಟಲಿಂಗ ತತ್ತ್ವಕ್ಕೂ, ಸ್ಥಾವರಲಿಂಗತತ್ತ್ವಕ್ಕೂ ಏನೂ ವ್ಯತ್ಯಾಸವಿಲ್ಲವೆ? ಸೈದ್ಧಾಂತಿಕವಾಗಿ – ತಾತ್ವಿಕವಾಗಿ ಏನೂ ಅರ್ಥವ್ಯತ್ಯಾಸಗಳು ಇಲ್ಲವೆ? ಆಕಾರ (ಹಿರಿ–ಕಿರಿದು) ವೆಂದೆನ್ನುಳಿದು ಈ ಇಷ್ಟಲಿಂಗವೂ ಗುಡಿಯ ಸ್ಥಾವರ ಲಿಂಗವೂ ಒಂದೇ ಆಗಿದೆಯೇ? ಬಸವಣ್ಣನ ವಚನಗಳಲ್ಲಿ 'ಜಗದಗಲಮುಗಿಲಗಲ' – ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿಯ್ಯಾ!? ಎಂಬುದರಲ್ಲಿ ಸ್ಥಾವರ ಲಿಂಗವನ್ನೇ ಕಿರಿದಾಗಿಸಿ ಪೂಜೆಗೆ ಕೊಟ್ಟು ಅರ್ಥವಿದೆಯೇ?' ಅಥವ ಗಹನ ಶೂನ್ಯ ತತ್ತ್ವವನ್ನು ಪ್ರತಿಪಾದಿಸುವಂತೆ ಗೋಳಾಕಾರದ ಬ್ರಹ್ಮಾಂಡದ ಪ್ರತಿರೂಪಿನಂತಹ ಶೂನ್ಯ ತತ್ತ್ವವನ್ನು ಪ್ರತಿಪಾದಿಸುವಂತೆ ಗೋಳಾಕಾರದ ಬ್ರಹ್ಮಾಂಡದ ಪ್ರತಿರೂಪಿನಂತಹ ಆಕಾರವಾಗಿದ್ದು ಒಳಗಡೆ ಆತನಕ ಪರಂಪರಾಗತವಾಗಿದ್ದ ಸ್ಥಾವರ ಲಿಂಗವನ್ನು ಒಳಗೊಂಡು ತಾತ್ವಿಕ – ಸೈದ್ಧಾಂತಿಕವಾಗಿ ಮುನ್ನೆಡದ ದರ್ಶನ ಭಾವವಿದೆಯೆ? **Concise** ಅಥವಾ ಸಂಕ್ಷಿಪ್ತತೆಯೇ ಇದರ ಸಾಧನೆಯೇ? ಅಥವಾ ಗುರುವಿನ ಹಸ್ತಪುಸ್ತಕ ಸಂಯೋಗದೊಂದಿಗೆ ಶಿಷ್ಯನಿಗೆ ಬರುವ ಆತ್ಮನ (ಭಕ್ತನ) ಅಂತರಂಗದಲ್ಲಿರುವ ಶಿವನನ್ನು ಅಂಗೈಯ ರಂಗಕ್ಕೆ ಆಹ್ವಾನಿಸಿ ಅರ್ಚಿಸುವ ಸಾಧಾನವೆಂಬರ್ಥದ್ಲಿ ಇಷ್ಟಲಿಂಗವು ಸ್ಥಾವರದ ಸಂಕ್ಷಿಪ್ತತ ರೂಪ ಮಾತ್ರವಲ್ಲ, ಅದನ್ನೂ ಮೀರಿದ ವಸ್ತುವೆಂಬರ್ಥದಲ್ಲಿ ಅದರ ಮಹತ್ವ ಇದೆಯೇ? ನಿಜಕ್ಕೂ ಇಷ್ಟಲಿಂಗ ಜನಕರು ಯಾರು? ಇಷ್ಟಲಿಂಗದ ಪ್ರಯೋಜನಗಳೇನು?"

ಈ ಪ್ರಬಂಧದ ಶೀರ್ಷಿಕೆಯಾದ 'ಇಷ್ಟಲಿಂಗ ತತ್ತ್ವ'ದ ವಿಷಯ ಈ ವಿಷಯದಲ್ಲಿ ಎತ್ತಿರುವ ಪ್ರಶ್ನೆಗಳಿಗೆ ಸಮಾಧಾನ ಕೊಟ್ಟು ಬರೆಯುವುದು ಮತ್ತೊಂದು ವಿಚಾರವಾಗಿದೆ. ಇಲ್ಲಿ ಪ್ರಮುಖವಾಗಿ ಈ ವಿಷಯದಲ್ಲಿ ಈ ಲೇಖನವನ್ನೂ ರಚಿಸಲಾಗಿದೆ. ಕ್ರಮವಾಗಿ ವಿಷಯ ನಿರೂಪಣೆಯನ್ನು ಮಾಡಲಾಗಿದೆ.

ಪ್ರಬಂಧ:– ದೈವೀಗುಣಗಳನ್ನು ಆರಾಧಿಸದೇ ನೇರವಾಗಿ ದೈವವನ್ನೇ ಗುಣಾತೀತವಾಗಿ, 'ತತ್ತ್ವ'ವಾಗಿ ಆರಾಧಿಸುವ ಕ್ರಮವೇ 'ಲಿಂಗಪೂಜೆ'ಯಾಗಿದೆ. ಈ ಲಿಂಗಪೂಜಾಕ್ರಮವು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇಲ್ಲಿ ವೀರಶೈವರ 'ಇಷ್ಟಲಿಂಗ'ದ ವಿಚಾರ ಪ್ರಸ್ತಾಪ ಮಾಡಿರುವುದರಿಂದ, ಈ ವೀರಶೈವರು ಇಂದಿನ ಕಾಲಕ್ಕೆ ತನ್ನನ್ನು ತಾನು ಮೂರು ನೆಲೆಗಳಲ್ಲಿ ಪ್ರತಿಪಾದಿಸಿಕೊಂಡಿದೆ. 1) ಶಾಸ್ತ್ರ ವಿಚಾರವಾಗಿ 2) ಅನುಭಾವಗಳ ವಿಚಾರವಾಗಿ 3) ಸಂಪ್ರದಾಯ ಆಚರಣೆಗಳ ಮುಖಾಂತರವಾಗಿ, ಶಾಸ್ತ್ರವು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವಾಗಿದೆ. ಅನುಭಾವವು ಸಮಗ್ರ ಬಸವಾದಿ ಶಿವಶರಣರ ರಚನ ಸ್ವಾತ್ಯವಾಗಿದೆ. ಹಾಗೂ ಗುರು, ವಿರಕ್ತ ಸಂಪ್ರದಾಯದ ಆಚರಣೆಗಳಾಗಿವೆ. ಈ ಮೂರು ವಿಚಾರಗಳು ಇವತ್ತಿಗೆ ವೀರಶೈವದಲ್ಲಿ ಅಧ್ಯಯನ ಆಚರಣೆ, ಮನನಗಳಿಗೆ ದೊರಕುತ್ತವೆ. ಆದ್ದರಿಂದ ಈ ವೀರಶೈವದಲ್ಲಿನ 'ಲಿಂಗತತ್ತ್ವ' ಆರಾಧನೆಯನ್ನು ಇಷ್ಟಲಿಂಗೋಪಾಸನೆಯ ಮೂಲಕ ಮಾಡುವ ಕ್ರಮ ಅತ್ಯಂತ ವೈಜ್ಞಾನಿಕ ನೆಲಗಟ್ಟಿನ ಮೇಲೆ ಪ್ರತಿಪಾದಿತವಾಗಿದ್ದು, ಅದು ಅನುಚಾನವಾಗಿ ನಡೆದುಕೊಂಡು ಬಂದಿದೆ. ಈ ಇಷ್ಟಲಿಂಗ ಸ್ವರೂಪದ ಲಿಂಗತತ್ತ್ವದ ಉಪಾಸನೆಗಳನ್ನು ಅನೇಕ ಆಗಮಗಳಲ್ಲಿ ಪ್ರತಿಪಾದಿತವಾಗಿರುವುದನ್ನು ಕಾಣಬಹುದು. ಪಾರಮೇಶ್ವರಾಗಮದ ಪಂಚಮ ತಟದದಲ್ಲಿ 'ಲಿಂಗಸ್ತುತಿ'ಯನ್ನು ಎಂಟು ಶ್ಲೋಕಗಳಲ್ಲಿ ಮಾಡಲಾಗಿದೆ. ಅವುಗಳಲ್ಲಿ ಕಡೆಯ ಶ್ಲೋಕ ಹೀಗಿದೆ.

ತಿಷ್ಠ ದೇಹೇ ಮಮ ಸದಾ! ಮಮ ದೇಹೇ ತವಾತ್ಮತಾಮ್!

ದೇಹಿ ಸಾಯುಜ್ಯ ಮೀಶಾನ! ಸೌಭಾಗ್ಯಂ ಶಿವಂ ಶಂಕರ* !! ಪಲ್ಲವಿ !!
–ಪಾರಮೇಶ್ವರಾಗಮ

ನನ್ನ ದೇಹದಲ್ಲಿ ಸದಾ ನೆಲಸು. ಈ ನನ್ನ ದೇಹ ನೀನೇ. ಈಶಾನ, ಶಿವ, ಶಂಕರನೇ ನನಗೆ ಸಾಯುಜ್ಯವನ್ನು ನೀಡು." ಈ ರೀತಿಯಲ್ಲಿ ಸಾಧಕನು ತನ್ನ ದೇಹದಲ್ಲೇ ಪ್ರತಿಷ್ಠಿತ 'ಅಭಿವ್ಯಕ್ತತೆ'ಯಾಗಿದೆ. 'ಲಿಂಗ'ವೆಂದರೆ, 'ಅಖಂಡ ಚೈತನ್ಯಾನ್ಮಕ ಶಕ್ತಿ'ಯಾಗದೆ.

ಅಖಂಡ ಚೈತನ್ಯವೇ ಶಿವ ತತ್ತ್ವಾದರೆ, ಅದರ ಶಕ್ತಿ ಸ್ವರೂಪವಾದ 'ಚಿತ್'ಸ್ವರೂಪವೇ ಶಕ್ತಿಯಾಗಿದ್ದು, ಈ 'ಶಿವ–ಶಕ್ತಿ' ಸಂಪುಟವೇ ಈ 'ಲಿಂಗ ತತ್ತ್ವ'ದ ಸ್ವರೂಪವಾಗಿದೆ. ಈ ಶಿವ–ಶಕ್ತಿ ಸಂಪುಟವು ನಿರಂತರ ಎಲ್ಲಾ ಸ್ಥಿತಿಗಳಲ್ಲೂ ಪರಸ್ಪರ ಅವಿನಾಭಾವ ಸಂಗಂಧವಿದೆಯೆಂದು ಶಕ್ತಿ ವಿಶಿಷ್ಟಾದ್ವೈತ ದರ್ಶನವು ಪ್ರತಿಪಾದಿಸುತ್ತದೆ. ಇದು ಅತ್ಯಂತ ಸಮರ್ಥವಾದ ವೈಜ್ಞಾನಿಕ ವಿಚಾರವೂ ಸಹ ಆಗಿದೆ. ಇಷ್ಟಲಿಂಗವನ್ನು ಸಾಧಕನಲ್ಲಿಯ 'ಚಿತ್ಕಳಾ' ಸ್ವರೂಪದ ಪ್ರತೀಕವಾಗಿ (ಕುರುಹು ಗುರುತು, ಚಿಹ್ನೆ, ಸಂಕೇತ, ಲಾಂಛನ, ಪ್ರತೀಕ) ಪ್ರತಿಪಾದಿಸಲಾಗಿದೆ. ಈ 'ಚಿತ್' ಸ್ವರೂಪವೇ ಪರಮಾತ್ಮ ಸ್ವರೂಪವಾದಾಗ, ಸಾಧಕನು 'ಚಿತ್ತ' ಸ್ವರೂಪದ ಜೀವಾತ್ಮನಾಗಿದ್ದಾನೆ. ಈ ಚಿತ್ತ 'ಸ್ವರೂಪವು' ಚಿತ್ ಸ್ವರೂಪವಾಗುವಿಕೆಯೇ ಸಾಧಕನ ಸಾಧನೆಯಾಗಿದೆ. ಅದು ಲಿಂಗತತ್ತ್ವದ ಅನುಸಂಧಾನ ಇಷ್ಟಲಿಂಗದ ಉಪಾಸನೆಯಿಂದ ಸಾಧ್ಯವಾಗುತ್ತದೆ. ಈ ಸಾಧನೆಯನ್ನು 'ಸಪ್ತ ಪ್ರಮಾತೃ' ವರ್ಗಗಳ ಹಿನ್ನೆಲೆಯಲ್ಲಿ ಪ್ರತಿಪಾದಿತವಾಗಿದೆ.

ಇನ್ನು ಇಷ್ಟಲಿಂಗ ಮತ್ತು ಸ್ಥಾವರ ಲಿಂಗಗಳು ಎರಡೂ ಸಹ 'ಲಿಂಗತತ್ತ್ವ'ವನ್ನೇ ಪ್ರತಿಪಾದಿಸಿದರೂ ಸಹ ಒಂದು ವ್ಯಷ್ಟಿಪ್ರಜ್ಞೆಯಾದರೆ, ಮತ್ತೊಂದು ಸಾಮೂಹಿಕವಾಗಿ ಸಮುಷ್ಠಿ ಪ್ರಜ್ಞೆಯಾಗಿದೆ. ಒಂದು ಪಿಂಡಾಂಡ ಪ್ರಜ್ಞೆಯೆಂದರೆ ಮತ್ತೊಂದು ಬ್ರಹ್ಮಾಂಡ ಪ್ರಜ್ಞೆಯಾಗಿದೆ. ಈ ಎರಡೂ ನೆಲೆಗಳಲ್ಲ 'ಲಿಂಗತತ್ತ್ವ'ವು ಮುವ್ವತ್ತಾರು ತತ್ತ್ವಗಳ ಹಿನ್ನೆಲೆಯಲ್ಲೇ ಪ್ರತಿಪಾದನೆಯಾಗಿದೆ. ಎರಡೂ ಸಹ 'ತತ್ತ್ವ' ಸ್ವರೂಪದಲ್ಲೇ ಇದೆ. ಇಷ್ಟಲಿಂಗ ವನ್ನು ಪೂಜಿಸಿದರೆ ಏನು ಪ್ರಯೋಜನವೋ, ಸ್ಥಾವರಲಿಂಗವನ್ನು ಪೂಜಿಸಿದರೆ ಅದೇ ಪ್ರಯೋಜನವಿದೆ. ಒಂದು ವ್ಯಕ್ತಿಯ 'ಚಿತ್‌ಕಳೆ'ಯಾದರೆ, ಮತ್ತೊಂದು ಸಾಮೂಹಿಕ ನೆಲೆಯ 'ಚಿತ್‌ಕಳೆ'ಯಾಗಿದೆ. ಎರಡೂ ನೆಲೆಯಲ್ಲಿನ

'ಚಿತ್‌ಕಳಾ' ಸ್ವರೂಪದ ಲಿಂಗತತ್ತ್ವಗಳು "ಶೂನ್ಯ ತತ್ತ್ವ"ಗಳಾಗಿಯೇ ಇವೆ. ಈ ಎರಡೂ ನೆಲೆಯಲ್ಲಿನ 'ಚಿತ್‌ಕಳಾ' ಸ್ವರೂಪದ ಲಿಂಗತತ್ತ್ವಗಳು ಮೂಲದಲ್ಲಿ ನಿರಾಕಾರ ಶೂನ್ಯ ತತ್ತ್ವಗಳಾಗಿಯೇ ಇದೆ. ಈ ನಿರಾಕಾರಶೂನ್ಯ ತತ್ತ್ವಗಳು, ಸಾಕಾರ ಶೂನ್ಯತತ್ತ್ವಗಳಾಗಿ ಪರಮಾತ್ಮ, ಜೀವಾತ್ಮಗಳಾಗಿ ತ್ರಿವಿಧ ಶೂನ್ಯಗಳಾಗಿ ಈ ಪ್ರಪಂಚದಲ್ಲಿ ವ್ಯಸ್ತವಾಗಿವೆ. ಇವನ್ನೇ ವೀರಶೈವ ಪರಿಭಾಷೆಯಲ್ಲಿ ಗುರು, ಲಿಂಗ, ಜಂಗಮರೆಂದು ತ್ರಿವಿಧಗಳೆಂದು ತತ್ತ್ವಗಳನ್ನಾಗಿ ತಿಳಿಯಲಾಗಿದೆ. ಆದ್ದರಿಂದ ಇಷ್ಟಲಿಂಗವು ಮತ್ತು ಸ್ಥಾವರ ಅಂಗಗಳು ಒಂದೇ 'ಲಿಂಗತತ್ತ್ವ'ವನ್ನು ಸೃಷ್ಠಿ ಸಮಷ್ಠಿ ನೆಲೆಗಳಲ್ಲಿ ಪ್ರತಿಪಾದಿಸುತ್ತದೆ.

- ಶಿವ ಶಂಕರ, ಈಶಾನ, ಇತ್ಯಾದಿ ಹೆಸರುಗಳನ್ನು ಸಾಕಾರ ಸ್ವರೂಪವಾದ 'ಶಿವ' ತತ್ತ್ವದ ಅನೇಕ ಹೆಸರುಗಳಾಗಿವೆ. ಈ ತತ್ತ್ವದ ಅನೇಕ ಗುಣಧರ್ಮಗಳನ್ನು ಈ ಹೆಸರುಗಳು ಪ್ರತಿಪಾದಿಸುತ್ತವೆ. ಆದರೆ ಇದೇ ನಿರಾಕಾರ ತತ್ತ್ವ ಸ್ವರೂಪದಲ್ಲಿ ಗುಣಾತೀತವಾಗಿ, 'ಪರಶಿವ' ತತ್ತ್ವಗಳಾಗಿ ತನ್ನನ್ನು ಪ್ರಕಟಗೊಳಿಸಿಕೊಳ್ಳುತ್ತದೆ.

**(3)**

ರಚನಾತ್ಮಕವಾಗಿ ವೀರಶೈವ ಸಾಧಕರು ಧರಿಸುವ ಇಷ್ಟಲಿಂಗ ಕಂಥೆಯ ಹಿಂದೆ ಇರುವ ಲಿಂಗವು ಪುಟ್ಟ ಶಿಲಾಲಿಂಗವಾಗಿದ್ದು, ಅದೂ ಸಹ ದೇವಸ್ಥಾನದಲ್ಲಿರುವ ಶಿಲಾಲಿಂಗದಂತೆಯೇ ಪ್ರಮಾಣ ಬದ್ಧವಾಗಿರುತ್ತದೆ. ಅಂದರೆ, ಲಿಂಗದ ಬಣ್ಣ, ಪೀಠ, ಪಾಣಿ ಇವುಗಳು ಸತ್ರವಣದಲ್ಲಿ ನಿಯೋಜಿಸಲ್ಪಟ್ಟಿರುತ್ತದೆ. ಈ ಶಿಲಾಲಿಂಗಗಳು ಪುಟ್ಟವಾಗಿರಲಿ, ದೊಡ್ಡದಾಗಿರಲಿ, ಈ ಪ್ರಮಾಣಗಳು ಆಗಮ ವಿಷ ಪೂರ್ವಕ ನಿರ್ಮಿತವಾಗಿರುತ್ತದೆ. ಕೆಲವು ದೇವಸ್ಥಾನಗಳಲಿಲ ದೊಡ್ಡದಾದ ಶಿಲಾಲಿಂಗವು ನೇರವಾಗಿ ಪೂಜಗೊಂಡರೂ ಸಹ, ಕೆಲವು ದೇವಸ್ಥಾನಗಳಲಿಲ ಆ ಶಿಲಾ ಲಿಂಗಾಂಗದ ಮೇಲೆ ಕಂಥೆ ಇರುವಂತಹುದು ಆಗಿದೆ.

ಈ ಇಷ್ಟಲಿಂಗದ ಕಂಥೆಯೊಳಗೆ ಇರುವ ಪುಟ್ಟ ಶಿಲಾಲಿಂಗವು, ಸ್ಪಟಿಕಶಿಲೆಯಿಂದ ರಚಿತವಾದ ಅಥವಾ ಶ್ರೀ ಕೈಲಾದಿ ಮಹಾಪರ್ವತ ಶಿಲೆಯಿಂದ ನಿರ್ಮಿಸಲಾದ ಚಂದ್ರಕಾಂತ ಶಿಲಾ ನಿರ್ಮಿತವಾದ ಅಥವಾ ನರ್ಮದಾ ನದಿಯಲ್ಲಿ ಹುಟ್ಟಿದ ಒಂದು ಲಿಂಗವಾಗಿರುತ್ತದೆ. ಈ ಪುಣ್ಯಶಿಲಾಲಿಂಗವನ್ನು ಸಂಸ್ಕಾರಯುತವಾಗಿ ಗುರುಗಳು ತಾಯಿಗ ಗರ್ಭದಲ್ಲಿ ಮಗುವು ಎಂಟನೇ ತಿಂಗಳಲ್ಲಿ ಇರುವಾಗಲೇ ತಾಯಿಯ ಗರ್ಭಕ್ಕೆ ದೀಕ್ಷಾ ಸಂಸ್ಕಾರ ರೂಡಿ, ತಾಯಿಯ ಕಿವಿಯಲ್ಲೇ ಶಿವ ಪಂಚಾಕ್ಷರಿ ಮಂತ್ರವನ್ನು ಮಗುವಿಗೆ ಉಪದೇಶಮಾಡಿ ಆ ಪುಟ್ಟ ಶಿಲಾಲಿಂಗವನ್ನು ವಸ್ತ್ರದ್ಲಲಿ ಕಟ್ಟಿ ತಾಯಿಯ ರೆಟ್ಟೆಗೆ ಗುರುಗಳು ಕಟ್ಟಿರುತ್ತಾರೆ. ಆ ಶಿಶುವಿನ ಜನನವಾದ ಹನ್ನೊಂದನೆಯಹ ದಿನ ಶಿಶುವಿನ ನಾಮಕರಣದಲ್ಲಿ ಅದೇ ವಸ್ತ್ರದಲ್ಲಿದ್ದ ಇಷ್ಟಲಿಂಗದ ಪುಟ್ಟ ಶಿಲಾಲಿಂಗವನ್ನು ಶಿಶುವಿನ ಕೊರಳಿಗೆ ಕಟ್ಟಿ ಪುನಃ ಶಿಶುವಿನ ಕರ್ಣದಲ್ಲಿ ಶಿವಪಂಚಾಕ್ಷರಿ ಮಹಾಮಂತ್ರವನ್ನು ಗುರುವು ಉಪದೇಶ ಮಾಡುತ್ತಾರೆ. ಅದೇ ಶಿಶು ಎಂಟು ವರ್ಷದ ಮಗುವಾದಾಗಮ, ಅವನಿಗೆ ಅದೇ ಪುಟ್ಟ ಶಿಲಾಲಿಂಗಕ್ಕೆ ಕಂಥೆ ಇಡಿಸಿ, ಇಷ್ಟಲಿಂಗದ ಗೋಳಾಕಾರ ಸ್ವರೂಪದಲ್ಲಿ ಪಾಣಿಯ ದಿಕ್ಕನ್ನು ಆ ಲಿಂಗದಲ್ಲಿ ಗುರುತು ಮಾಡಿಕೊಡುತ್ತಾರೆ. ಆಗ ದೀಕ್ಷನಾದ ಮಗುವು ತನ್ನ ಜೀವನ ಪರ್ಯಂತರ ಇಷ್ಟಲಿಂಗದ ಆರಾಧನೆಯನ್ನು ಆ ಲಿಂಗದ ಪಾಣಿಯ ಗುರುತನ್ನು ತನ್ನ ಎಡಗಡೆ ಬರುವಂತೆ ಹಸ್ತದಲ್ಲಿರಿಸಿ, ಪೂಜಿಸಬೇಕು. ದೇವಸ್ಥಾನದ್ಲಲಿ ಶಿಲಾಲಿಂಗದ ಪಾಣಿಯು ಭಕ್ತನಿಗೆ ಬಲದಲ್ಲಿರುತ್ತದೆ. ಆದರೆ ಈ ಇಷ್ಟಲಿಂಗದ ಪಾಣಿ ಸಾಧಕನ ಎಡಕೆಕ ಇರುವುದರಿಂದ ಸಾಧಕನೇ ಸ್ವತಃ "ಲಿಂಗ" ಸ್ವರೂಪವಾಗಿ ಬೇರೆಯವರಿಗೆ ಕಾಣುತ್ತಾನೆ. ಅಂದರೆ ಸಾಧಕನು ತನ್ನಲ್ಲಿರುವ ತನ್ನ ಚಿತ್ಕಳಾ ಸ್ವರೂಪವಾಗಿರುವ ಲಿಂಗತತ್ತ್ವವನ್ನೇ ತಾನೆ ಪೂಜಿಸಿಕೊಳ್ಳುತ್ತಾನೆ. ಅಂದರೆ ಇಷ್ಟಲಿಂಗದ ವಿಶಿಷ್ಟತೆ ಇರುವುದು

ಅದು ಲಿಂಗತತ್ತ್ವವನ್ನು ಅರಿದು, ಲಿಂಗತತ್ತ್ವವನ್ನು  ಆಚರಿಸಿ ಲಿಂಗತತ್ತ್ವ ಆಚರಿಸಿ ಲಿಂಗತತ್ತ್ವವಾಗುವ ಪ್ರಕ್ರಿಯೆಯೇ ಈ ಇಷ್ಟಲಿಂಗೋಪಾಸನೆಯ ಮೂಲಗಳಾಗಿವೆ. ಈ ಉಪಾಸನಾ ಕ್ರಮದಲ್ಲಿ ಯಾರೇ ಅನ್ಯರ ಮಧ್ಯಪ್ರವೇಶವಿಲ್ಲದೆ, ಇರುವ ಅತ್ಯಂತ ವೈಜ್ಞಾನಿಕ ಉಪಾಸನಾ ಕ್ರಮವಾಗಿದೆ.

ಈ ಪುಟ್ಟ ಶಿಲಾಲಿಂಗದ ಮೇಲೆ ಕಂಥೆ ಇಟ್ಟು ಇಷ್ಟಲಿಂಗ ಸ್ವರೂಪದಲ್ಲಿರುವ ಕಪ್ಪು ಲಿಂಗವು; ದೃಷ್ಟಿಯೋಗದ ಹಿನ್ನೆಲೆಯ್ಲಿ ಅತ್ಯಂತ ಸಮರ್ಥವಾದ ಸಾಧನವಾಗಿದೆ. ಸುಮಾರು ಒಂದೂವರೆ ಘಂಟೆಗಳ ಕಾಲ ಒಂದೇ ಸಮನೆ ಏಕಾಗ್ರತೆಯಿಂದ  ಅನುಸಂಧಾನ ಮಾಡಿದರೆ ಸಾಧಕನ ಮನವು ಅಂತರಮುಖಿಯಾಗುವುದೆಂಬ ತಿಳುವಳಿಕೆ ಇದೆ. ಈ ನಿಟ್ಟಿನಲಿಲ ಇಷ್ಟಲಿಂಗ ಸ್ವರೂಪದಲ್ಲಿರುವ ಕಪ್ಪು ಕಂಥೆಯು ಸಾಧಕನ ದೃಷ್ಟಿಯಯೋಗದ ಯೋಗ್ಯ ಹಾಗೂ ಸಮರ್ಥವಾದ 'ಸಾಧನ'ವಾಗುತ್ತದೆ. ಈ ದೃಷ್ಟಿಯೋಗದ ಸಹಾಯದಿಂದ ಅನುಭವ ಹೆಚ್ಚಿದ ಹಾಗೆ ಒಂದೂವರೆ ಘಂಟೆಗಳ ಕಾಲದ ಅವಧಿ ಕಡಿಮೆಯಾಗುತ್ತಾ ಹೋಗಿ, ಸಾಧಕನು ಅಪೇಕ್ಷಿಸಿದ ತಕ್ಷಣ ಮನವನ್ನು ಅಂತರರ್ಮುಖಿ ಮಾಡಲು ಇಷ್ಟಲಿಂಗದ ಮೂಲಕ ಸಮರ್ಥನಾಗಿ 'ಶಿವಯೋಗ'ದ ಪ್ರಕ್ರಿಯೆಗಳಲ್ಲಿ ತನ್ನನು ತೊಡಗಿಸಿಕೊಳ್ಳುವ ಅವಕಾಶಗಳನ್ನು ಹೊಂದುತ್ತಾನೆ.

ಇಷ್ಟಲಿಂಗಕ್ಕೂ ಸ್ಥಾವರ ಲಿಂಗಕ್ಕೂ ಇರುವ ವ್ಯತ್ಯಾಸವನ್ನು ಮೇಲೆ ಪ್ರತಿಪಾದಿಸಲಾಗಿದೆ. ದೇವಸ್ಥಾನದಲ್ಲಿ ಸ್ಥಾವರ ಲಿಂಗವನ್ನು ಪ್ರತಿಷ್ಠಾಪಿಸಿದ ಪ್ರಾಣ ಪ್ರತಿಷ್ಠೆ ಮಾಡುವ ಆಗಮಿಕನು (ಲಿಂಗತತ್ತ್ವವಾಗಿರುವವನು) ತನ್ನ ಬಲದ ಹಸ್ತವನ್ನು ತನ್ನ ಶಿರದ ಮೇಲಿರಿಸಿ, ಅದೇ ಹಸ್ತವನ್ನು ಪ್ರತಿಷ್ಠಾಪನೆಗೊಳ್ಳುವ ಸ್ಥಾವರ ಲಿಂಗದ ಮೇಲೆ ಇಟ್ಟು, ತನ್ನಲ್ಲಿರುವ ಚಿತ್‌ಕಳೆಯನ್ನೇ ಆ ಸ್ಥಾವರಲಿಂಗದಲ್ಲಿ ಪ್ರತಿಷ್ಠಿತಿ ಆ ಸ್ಥಾವರ ಲಿಂಗವನ್ನು ಪೂಜಾರ್ಹವನ್ನಾಗಿಸುತ್ತಾನೆ. ಈ ಸ್ಥಾವರ ಲಿಂಗದಲ್ಲಾಗಲೀ ಅಥವಾ ಇಷ್ಟಲಿಂಗದಲ್ಲಾಗಲಿ ಯಾವುದೇ ಆಹ್ವಾನ ವಿಸರ್ಜನೆಗಳನ್ನು ಮಾಡುವ ಹಾಗಿಲ್ಲ. ಆ ಲಿಂಗಗಳಲ್ಲಿ ಶಿವನು ಸದಾ ಸನ್ನಿಹತನಾಗಿರುತ್ತಾನೆ. ಇದು ಕ್ರಮವಾಗಿದೆ. ಸೈದ್ಧಾಂತಿಕವಾಗಿ ತಾತ್ವಿಕವಾಗಿ ಈ ಇಷ್ಟಲಿಂಗದಲ್ಲಾಗಲೀ ಅಥವಾ ಸ್ಥಾವರ ಲಿಂಗದಲ್ಲಾಗಲಿ ಯಾವುದೇ ರೀತಿಯ ಅರ್ಥ ವ್ಯತ್ಯಾಸಗಳು ಇಲ್ಲದಿದ್ದರೂ ಸಹ ಇಷ್ಟಲಿಂಗವು ವೈಯಕ್ತಿಕ ನೆಲೆಯ ಸಾಧಕನಲ್ಲಿಯೇ ಇರುವ ಅವನ ಚಿಕ್ಕಳೆಯ ಕುರುಹು ಆದರೆ, ಸ್ಥಾವರ ಲಿಂಗವು ಸಮಷ್ಠಿ ನೆಲೆಯ ಡಿತ್ಕಳೆಯ ಪ್ರತೀಕವಾಗಿದೆ. ಸ್ಥಾವರಲಿಂಗದಲಿಲ ಸಾಧಕನ ಚಿತ್ಕಳೆಯೂ ಸಹ ಸೇರಿಕೊಂಡಿದೆ. ಇದು ಈ ವಿಶ್ವದ ಸಮಸ್ತ ಚಿಕ್ಕಳೆಯು, ಇಷ್ಟಲಿಂಗದಲ್ಲಿಯೂ ಸಹ ಒಂದೇ ಆಗಿರುವ ರೀತಿಯಲ್ಲಿದೆ. ಒಂದು ಆಲಯದಲ್ಲಿನ ಬಯಲು, ಆಲಯದ ಹೊರಗಿನ ಬಯಲು ಒಂದೇ ಆಗಿರುವ ರೀತಿಯಲ್ಲಿದೆ.

ಬಸವಣ್ಣನವರ ವಚನಗಳು ಪುರುಷ ಸೂಕ್ತ ಪಾಠದ ಸಹಸ್ರಶೀರ್ಷ, ಪುರಷಃ ಸಹಸ್ರಾಕ್ಷ ಸಹಸ್ರಪಾಣಿ, ಇತ್ಯಾದಿ ಆ ಪುರುಷ ಸ್ವರೂಪದ ಲಿಂಗತತ್ತ್ವವನ್ನೇ ಚಿಕ್ಕಳಾ ಸ್ವರೂಪಪವಾಗಿ ಆರಾದಿಸುವ ಕ್ರಮವನ್ನು 'ಜಗದಗಲ' ವಚನಲ್ಲಿನ ಕರಸ್ಥಲಕ್ಕೆ ಒಂದು ಚುಳಕಾದಿರಯ್ಯಾ ಎಂಬ ಅರ್ಥದಲ್ಲಿ ನಿರೂಪಣೆ ಮಾಡಲಾಗದಿದೆ.

ಇಷ್ಟಲಿಂಗವು ಸ್ಥಾವರ ಲಿಂಗದ ಕಿರಿದಾದ ಸ್ವರೂಪವಲ್ಲ. ಇಷ್ಟಲಿಂಗ ಸ್ಥಾವರ ಲಿಂಗಗಳ ಅಭಿವ್ಯಕ್ತತತೆಗಳನ್ನು, ಅವುಗಳ ಹಿನ್ನೆಲೆಯ ಲಿಂಗತತ್ತ್ವವನ್ನೂ ಈ ಹಿಂದೆ ನಿರೂಪಣೆ ಮಾಡಲಾಗಿದೆ. ಇನ್ನು ಇಷ್ಟಲಿಂಗದ ಸ್ವರೂಪ ಗೋಳಾಕಾರದ ಬ್ರಹ್ಮಾಂಡದ ಪ್ರತಿರೂಪದ ಗಹನ ಶೂನ್ಯ ತತ್ತ್ವವಾಗಿ ಎಂಬುದು ಸರಿಯಾದ ವಿಚಾರವಲ್ಲ. ಶೂನ್ಯತತ್ತ್ವಕ್ಕೆ ಯಾವುದೇ ಸ್ವಂತಿಕೆಯ ರೂಪವಿಲ್ಲ. ಎಲ್ಲಾ ಸ್ವರೂಪಗಳಲ್ಲ ಅದು ವ್ಯಸ್ತವಾಗಿರುತ್ತದೆ. ಈ ಕಾರಣದಿಂದಲೇ ಅದು ನಿರಾಕಾರ ಪರಮಾತ್ಮ ತತ್ತ್ವವಾದ ಗುರು ಸ್ವರೂಪವೂ, ಸಾಕಾರಪರಮಾತ್ಮ ತತ್ತ್ವವಾದ ಲಿಂಗ ಸ್ವರೂಪವೂ ಹಾಗೂ ಜೀವಾತ್ಮ ತತ್ತ್ವವಾದ ಜಂಗಮ ಸ್ವರೂಪವೂ, ತ್ರಿವಿಧ ಶೂನ್ಯ ತತ್ತ್ವಗಳಾಗಿವೆ. ಈ ತ್ರಿವಿಧಗಳಿಗೆ ಯಾವುದೇ ತನ್ನದೇ ಆದ ಶೂನ್ಯ ತತ್ತ್ವದ ಆಕಾರಗಳಿಲ್ಲ.

ಹೀಗಾಗಿ ಗೋಳಾಕಾರದ ಬ್ರಹ್ಮಾಂಡದ ಪ್ರತಿರೂಪದ ಅಭಿವ್ಯಕ್ತಿ ಈ ಸ್ವರೂಪಗಳಲ್ಲಿ ಒಂದಾಗಿದೆ ಅಷ್ಟೇ. ಸ್ಥಾವರ ಲಿಂಗದ ತಾತ್ವೀಕ ನೆಲೆಗಳ ಅರ್ಥಗಳು ಹಾಗೂ ಇಷ್ಟಲಿಂಗದ ತಾತ್ವೀಕ ನೆಲೆಗಳ ಅರ್ಥಗಳು ಒಂದನ್ನೊಂದು ಅನುಸರಿಸಿದೆ, ಅಥವಾ ಒಂದನ್ನೊಂದು ಅನುಸರಿಸಿಲ್ಲ ಎಂಬ ವಿಚಾರವನ್ನು ತಿಳಿಯಲು ಒಂದು ಮಾರ್ಗವಿದೆ. ಅದು ಇಷ್ಟಲಿಂಗೋಪಾಸಕರು ಅನುಸರಿಸುವ ಸಾಧನ ಮಾರ್ಗಗಳ, ಕುಂಡಲಿನಿ ಯೋಗ ಷಟ್‌ಚಕ್ರಭೇದ, ಮನಮಗ್ನಯೋಗ, ಶಿವಯೋಗ ಇತ್ಯಾದಿಗಳನ್ನು ಅನುಸರಿಸುತ್ತಾರೆ. ಹಾಗೆಯೇ ಸ್ಥಾವರ ಲಿಂಗದ ಪೂಜಕರೂ ಸಹ ಹೆಚ್ಚು ಕಡಿಮೆ ಇದೇ ಸಾಧನ ಮಾರ್ಗಗಳನ್ನು ಅನುಸರಿಸುತ್ತಾರೆ. ಹೀಗಾಗಿ, ಇಷ್ಟಲಿಂಗೋಪಾಸಕರು ತಾತ್ವೀಕವಾಗಿ ಹೆಚ್ಚು ವೈಜ್ಞಾನಿಕ ನೆಲೆಯ ಲಿಂಗತತ್ತ್ವದ ಅಭಿವ್ಯಕ್ತತೆ, ಲಿಂಗತತ್ತ್ವದ ಅರಿವು ಲಿಂಗತತ್ತ್ವದ ಆಚರಣೆ, ಲಿಂಗತತ್ತ್ವದ ಅನುಭವದ ನೆಲೆಗಳಲ್ಲಿ ಸಾಧನೆಮಾಡುತ್ತಾರೆ. ಹೀಗಾಗಿ 'ಇಷ್ಟಲಿಂಗೋಪಾಸನೆ'ಯು ಲಿಂಗತತ್ತ್ವದ ಅನುಭಾವಗಳಿಗೆ ಹೆಚ್ಚು ಹೆಚ್ಚು ಸಮೀಪದ ಚಿಂತನೆಗಳಿವೆ ಎಂದು ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಇಷ್ಟಲಿಂಗವನ್ನು ಕೈಯಲ್ಲಿ ಹಿಡಿಯುವುದರಿಂದ ಅದು ಅತಿ ದೊಡ್ಡ ಆಕಾರದಲ್ಲಿರುವುದು ಸಾಧ್ಯವಿಲ್ಲ. ಕಾರಣ ಅದು ಕೈಯಲ್ಲಿ ಚುಳುಕಾದಿರಬೇಕಾದ ಅನಿವಾರ್ಯತೆಗಳಿವೆ. ಆದ್ದರಿಂದ ಇಷ್ಟಲಿಂಗದ ಸಂಕ್ಷಪ್ತತೆಯಾಗಲಿ, ಅದರ ಬೃಹದಾಕಾರವಾಗಲೀ ಲಿಂಗತತ್ತ್ವದ ಅಭಿವ್ಯಕ್ತತೆಗೆ ಯಾವ ಭಾಧಕವೂ ಇಲ್ಲವಾಗಿರುತ್ತದೆ.

ದೀಕ್ಷಾ ಸಂದರ್ಭದಲ್ಲಿ ಗುರುವು ಸಾಧಕ ಶಿಷ್ಯನಿಗೆ ಇಷ್ಟಲಿಂಗ ಪ್ರಧಾನ ಮಾಡುವಾಗ ಮೂರು ರೀತಿಯ ದೀಕ್ಷೆಗಳ ಮುಖಾಂತರ ಮಾಡುತ್ತಾನೆ. 1) ವೇಧಾದೀಕ್ಷೆ 2) ಯಂತ್ರದೀಕ್ಷೆ ಹಾಗೂ 3) ಕ್ರಿಯಾದೀಕ್ಷೆ. ಸಾಧಕನು ಸಾಕ್ಷಾತ್ ಶಿವಸ್ವರೂಪಿಯಾಗಿದ್ದಾನೆ ಎಂದು ತಿಳಿದು ಗುರುವು ಹಸ್ತಮಸ್ತಕ ಸಂಯೋಗದಿಂದ (ವೇಧಾನಿದೀಕ್ಷೆ) ತದನಂತರರಲದಲ್ಲಿ ಶಿವಪಂಚಾಕ್ಷರಿಮಂತ್ರವನ್ನು ಶಿಷ್ಯನ ಬಲಗಿವಿಯಲ್ಲಿ ಉಪದೇಶ ಮಾಡುತ್ತಾನೆ. (ಮಂತ್ರದೀಕ್ಷೆ). ಇವುಗಳು ಪ್ರತಿಯೊಂದು ಏಳು ಏಳು ನೆಲೆಗಳಲ್ಲಿದ್ದು, ಒಟ್ಟು 21 ದೀಕ್ಷಾ ಕ್ರಮಗಳಲ್ಲಿ ಇಷ್ಟಲಿಂಗ ದೀಕ್ಷೆ ನಡೆಯುತ್ತದೆ. ಇವುಗಳನ್ನು ಕ್ರಿಯಾ ದೀಕ್ಷೆ, ಮಂತ್ರ ದೀಕ್ಷೆ, ಹಾಗೂ ವೇಧಾದೀಕ್ಷೆಗಳಾಗಿ, ಈ ಕೆಳಗಿನ ಕ್ರಮದಲ್ಲಿ ಪ್ರತಿಪಾದಿತವಾಗಿದೆ. ಆಜ್ಞಾಸಂಸ್ಕಾರ, ಉಪಮಾಸಂಸ್ಕಾರ, ಸ್ವತ್ತಿಕಾರೋಹಣ ಸಂಸ್ಕಾರ, ಕಲಶಾಭಿಷೇಕ ಸಂಸ್ಕಾರ, ವಿಭೂತಿಪಟ್ಟು ಸಂಸ್ಕಾರ, 'ಆಯತ' ಸಂಸ್ಕಾರ, ಸ್ವಾಯತ ಸಂಸ್ಕಾರ (ಇವು ಏಳು ಕ್ರಿಯಾ ದೀಕ್ಷೆ); ಸಮಯ ಸಂಸ್ಕಾರ, ನಿಃಸಂಸಾರ, ಸಂಸ್ಕಾರ, ನಿವಾಣಣ ಸಂಸ್ಕಾರ, ತತ್ತ್ವಸಂಸ್ಕಾರ, ಅಧ್ಯಾತ್ಮ ಸಂಸ್ಕಾರ, ಅನುಗ್ರಹ ಸಂಸ್ಕಾರ, ಸತ್ಯಶುದ್ಧ ಸಂಸ್ಕಾರ (ಇವು ಏಳೂ ಮಂತ್ರದೀಕ್ಷೆ); ಏಕಾಗ್ರಸಂಸ್ಕಾರ, ಧೃಢಕ್ರತಸಂಸ್ಕಾರ, ಪಂಚೇಂದ್ರಿಯಾರ್ಪಿತ ಸಂಸ್ಕಾರ, ಮಂತ್ರದೀಕ್ಷೆ); ಏಕಾಗ್ರಸಂಸ್ಕಾರ, ಧೃಢಕ್ರತಸಂಸ್ಕಾರ, ಪಂಚೇಂದ್ರಿಯಾರ್ಪಿತ ಸಂಸ್ಕಾರ,
ಈ ದೀಕ್ಷಾ ಸಂಸ್ಕಾರದ ಹೆಸರುಗಳು ಆ ಗುರುಗಳಲ್ಲಿ, ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ವಚನ ವಾಙ್ಮಯದಲ್ಲಿ ನಿರೂಪಿಸಲಾಗಿದೆ. ಅಹಿಂಸಾ ಸಂಸ್ಕಾರ, ಮನೋಲಯ ಸಂಸ್ಕಾರ, ಸದ್ಯೋನ್ಮುಕ್ತಿ ಸಂಸ್ಕಾರ, (ಇವು ಏಳೂ ವೇಧಾ ದೀಕ್ಷೆ) ಈ ರೀತಿಯ ದೀಕ್ಷೆಗಳಲ್ಲಿ ಲಿಂಗವನ್ನು 'ಆಯತಮಾಡಿಕೊಳ್ಳುವ ಕ್ರಿಯಾ ದೀಕ್ಷೆ'ಯ ಕ್ರಮದಿಂದ ವೀರಶೈವರಿಗೆ 'ಲಿಂಗಾಯುತ'ರೆಂಬ ಪರ್ಯಾಯ ನಾಮವು ಸಹ ರೂಢಿಯಲ್ಲಿ ಬಂದಿದೆ. ಈ ಇಷ್ಟಲಿಂಗೋಪಾಸಕರಿಗೆ ವೀರಶೈವರೆಂಬುದು ಶಾಸ್ತ್ರೀಯ ನಾಮವಾದರೆ, ಲಿಂಗಾಯತ ಎಂಬುದು ರೂಢಿನಾಮವಾಗಿದೆ. ಆದರೆ ಈ ವೀರಶೈವ ಹಾಗೂ ಲಿಂಗಾಯುತ ಎಂಬ ಎರಡೂ ಹೆಸರುಗಳು ಒಂದಕ್ಕೊಂದು ಪರ್ಯಾಯ ನಾಮಗಳಾಗಿವೆ.

ಇಷ್ಟಲಿಂಗದ ಜನಕರು ಯಾರು? ಎಂಬ ಪ್ರಶ್ನೆಗೆ ಉತ್ತರ ಕೊಡಲು ಸಾಧ್ಯವಿಲ್ಲ. ಕಾರಣ, ಈ ಇಷ್ಟಲಿಂಗದ ಪ್ರಸ್ತಾಪ; ರಚನೆ, ಅರ್ಚನೆ ಇತ್ಯಾದಿ ವಿಚಾರಗಳು ಅನೇಕ ಶಿವಾಗಮಗಳಲ್ಲಿ ಪ್ರತಿಪಾದಿತವಾಗಿದೆ. ಆದ್ದರಿಂದ ಆಗಮಗಳ ರಚನಾಕಾಲದ ಹಿಂದಿಗೆ ಎಷ್ಟೋವರ್ಷಗಳಿಂದ ಇಷ್ಟಲಿಂಗದ ಉಪಾಸನೆ ನಡೆದುಕೊಂಡು ಬಂದಿದೆ. ಈ 28 ಶಿವಾಗಮಗಳ ಕಾಲ ಕೊನೆಗೆ ನಾಲ್ಕನೆಯ ಕ್ರಿಸ್ತಶಕ ವರ್ಷಗಳ ಶತಮಾನವಾಗಿದೆ. ಎಂದು ಕಂಚೀಶಾಸನದಿಂದ ತಿಳಿಯುವುದರಿಂದ ಕ್ರಿ.ಶ. 4ನೇ ಶತಮಾನಕ್ಕಿಂತ ಹಿಂದೆ ಎಷ್ಟೋ ವರ್ಷಗಳ ಹಿಂದಿನಿಂದ ಈ ಇಷ್ಟಲಿಂಗೋಪಾಸನಾ ಕ್ರಮವು ಉಂಟಾಗಿದೆಯೆಂದು ಖಚಿತವಾಗಿ ಹೇಳಬಹುದು. ಇನ್ನು ಇಷ್ಟಲಿಂಗದ ಪ್ರಯೋಜನಗಳು ಎಲ್ಲರಿಗೂ ತಿಳಿದಿರುವಂತೆ ಲಿಂಗತತ್ತ್ವದ ಅರಿವು, ಆಚಾರ, ಅನುಭಾವಗಳಿಗೆ ಅತ್ಯಂತ ವೈಜ್ಞಾನಿಕ ಕ್ರಮದಲ್ಲಿ ಬಹಳ ಸೂಕ್ತವಾಗಿ ಅನ್ವಯವಾಗುತ್ತವೆ. ಯಾವುದೇ ಪುರೋಹಿತ ಶಾಹಿಯ ಅಡ್ಡಿ, ತಡೆಗಳಿಲ್ಲದೆ, ಸಾಧಕನು ನೇರವಾಗಿ ತನ್ನ ಲಿಂಗತತ್ತ್ವದ ಆರಾಧನೆಯನ್ನು ಆಬಾಧಿತವಾಗಿ ಯಾವಾಗ ಬೇಕಾದರೂ, ಎಲ್ಲಿ ಬೇಕಾದರೂ ಮಾಡುವ ಸ್ವತಂತ್ರ ಹೊಂದಿರುವುದರಿಂದ, ವೀರಶೈವ ಧರ್ಮದಲ್ಲಿನ ಸಾಧಕರು ಈ ವಿಚಾರಗಳಲ್ಲಿ ಹೆಚ್ಚು ಸ್ವತಂತ್ರರಾಗಿದ್ದಾರೆ. ಸಾಧಕರು ದೃಷ್ಟಿಯೋಗದ ನೆಲೆಯಲ್ಲಿ ಎಲ್ಲಾ ಇತರೇ ಸಾಧನ ಮಾರ್ಗಗಳಿಂದ ಲಿಂಗತತ್ತ್ವದ ಅನುಭವ ಮಾಡಿಕೊಳ್ಳುವ ಕ್ರಮಗಳಿಗೆ ಸುಲಭವಾಗಿ ಒದಗುತ್ತಾರೆ.

3. ಲಿಂಗತತ್ತ್ವ: ಇಷ್ಟಲಿಂಗತತ್ತ್ವ:–

ಇದಿಷ್ಟೂ ಬಿ.ಹೆಚ್.ಇ.ಎಲ್. ಕಲ್ಯಾಣ ಸಮಿತಿ (ರಿ). ಇವರು ಪ್ರತಿಪಾದಿಸಿರುವ ವಿಚಾರವಾದರೆ, ಇನ್ನು ಮುಂದೆ ಈ ವಿಷಯದಲ್ಲಿ ಪ್ರಬಂಧವನ್ನು 'ಇಷ್ಟಲಿಂಗ ತತ್ತ್ವದ' ವಿಚಾರದಲ್ಲಿ ಮುಂದುವರಿಸಲಾಗುತ್ತದೆ. ದೈವವು ಲಿಂಗತತ್ತ್ವ ಸ್ವರೂಪದಲ್ಲಿ ಏನೆಲ್ಲಾ ಕಾರ್ಯಗಳನ್ನು ಮಾಡುತ್ತಿದೆ ಅದೆಲ್ಲಾ 'ದೈವದ ಧರ್ಮ'ವಾಗಿದೆ. (ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹ) ಮತ್ತು ಆ ದೈವಸ್ವರೂಪದ ಲಿಂಗತತ್ತ್ವ ಎಲ್ಲೆಡೆಯಲ್ಲಿ ಇದೆ. ಹಾಗೆಯೇ ಮನುಷ್ಯನಲ್ಲಿಯೂ ಇದೆ. ಮನುಷ್ಯನು ತನ್ನಲ್ಲಿರುವ ಆ ದೈವಸ್ವರೂಪದ ಲಿಂಗತತ್ತ್ವವನ್ನು ಅಭಿವ್ಯಕ್ತಿಗೊಳಿಸಿ, ಅರಿದು, ಆಚರಿಸಿ, ಅನುಭಾವ ಮಾಡಿಕೊಳ್ಳುವುದೇ "ಮಾನವ ಧರ್ಮ"ವಾಗಿದೆ. ಈ ಲಿಂಗತತ್ತ್ವದ ಅರಿವು, ಆಚಾರ, ಅನುಭಾವಗಳು, 'ಧರ್ಮ'ವಾದರೆ, ಮತ್ತೆಲ್ಲಾ ಇದರ ಸಂಭಂಧಿತ ಲೌಕಿಕ ವ್ಯವಹಾರಗಳು ಧರ್ಮಾಂಗ"ಗಳಾಗುತ್ತವೆ. ಹೀಗೆ ವೀರಶೈವವು ತನ್ನನ್ನು ತಾನು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಸಿದ್ಧಾಂತಗಳಾಗಿ ಪ್ರತಿಪಾದಿಸಿಗೊಳ್ಳುತ್ತದೆ. ಇವೆಲ್ಲದರ ಆಚರನೆ ಇಷ್ಟಲಿಂಗೋಪಾಸನೆಯ ಮೂಲದ ಲಿಂಗತತ್ತ್ವದ ಅಭಿವ್ಯಕ್ತತೆ, ಲಿಂಗತತ್ತ್ವದ ಅರಿವು, ಲಿಂಗತತ್ತ್ವದ ಆಚಾರ, ಹಾಗೂ ಲಿಂಗತತ್ತ್ವದ ಅನುಭಾವಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸಗಳಿಲ್ಲದಿದ್ದರೂ ಸಹ, ಲಿಂಗತತ್ತ್ವದ ಆಚಾರದಲ್ಲಿ ವ್ಯತ್ಯಾಸಗಳಿರುವ ಕಾರಣಗಳಿವೆ. ವೈಯಕ್ತಿಕ ಅಭಿರುಚಿ, ಆಸಕ್ತಿಗಳ ಹಿನ್ನೆಲೆಯಲಿಲ ಈ ಲಿಂಗತತ್ತ್ವದ ಆಚಾರ ನಡೆಯುವುದರಿಂದ, ಸರಿಯಾದ ತಿಳುವಳಿಕೆ ಈ ಲಿಂಗತತ್ತ್ವದ ಅಭಿವ್ಯಕ್ತತೆ ಹಾಗೂ ಅರಿವಿನ ಬಗ್ಗೆ ಆಗದಿದ್ದರೆ, ಈ ಲಿಂಗತತ್ತ್ವದ ಆಚರಣೆಗಳೇ 'ಧರ್ಮ'ವಾಗುವ ಅಪಾಯಗಳಿವೆ. ಕೇವಲ ಆಚಾರವೇ ಧರ್ಮವಾಗಲು ಸಾಧ್ಯವಿಲ್ಲ. ಆಚಾರವೇ ನಿಷ್ಪತ್ತಿಗೆ ಕಾರಣವಾದರೂ ಸಹ, ವಿಚಾರವಿಲ್ಲದ ಆಚಾರ, ಕೇವಲ ಧರ್ಮಾಂಧತೆಯಾಗಿ ಶುಷ್ಕ ಢಂಭಾಚಾರದ ಧರ್ಮವಾಗಿ ವ್ಯಕ್ತಿಗೆ ಪ್ರಯೋಜನವಾಗುವುದಿಲ್ಲ. ಯಾವುದೇ ಆಚಾರದಲ್ಲಿನ ವ್ಯತ್ಯಾಸಗಳು ಅರಿವಿನ ಹಿನ್ನೆಲೆಯಲ್ಲಿ ನಡೆದರೆ, ಎಲ್ಲಾ ರೀತಿಯ ವ್ಯತ್ಯಾಸಗಳಿರುವ ಆಚಾರಗಳೂ ಸಹ ನಿಷ್ಪತ್ತಿ ಹೊಂದಿ ಅನುಭಾವವಾಗುತ್ತದೆ. ಹೀಗೆ ಅರಿವಿನ ಸಹಾಯವಿಲ್ಲದ ಆಚರಣೆಗಳು, ಪರಸ್ಪರ ದೋಷಾರೋಪಣೆಗಳಿಗೆ ಗುರಿಯಾಗಿ 'ಧರ್ಮ'ದ ಆಶಯಗಳಲ್ಲಿ ಒಂದಾದ ಸಮಾಜದ ಒಗ್ಗಟ್ಟಿಗೆ ಭಂಗ ಬರುತ್ತದೆ. ಆದ್ದರಿಂದ ಬಸವಣ್ಣನವರ ಆಶಯ ಈ ಲಿಂಗತತ್ತ್ವದ

ನೆಲೆಯಲ್ಲಿ, ಭಕ್ತಿ, ಗುರು, ಲಿಂಗ, ವಿಚಾರ, ಆಚಾರ, ನಿಷ್ಪತ್ತಿ, ಅನುಭಾವ, ಈ ಕ್ರಮದಲ್ಲಿ ಸಾಧಕ ವ್ಯಕ್ತಿಯ ಅನುಸಂಧಾನ ನೆಡಯಬೇಕು. ಇವುಗಳ ಕ್ರಮದ್ಲಿಲ ಯಾವುದು ಇಲ್ಲದಿದ್ದರೂ ನಿಷ್ಪತ್ತಿಯ ವ್ಯವಹಾರವಿರುವುದಿಲ್ಲ. ಇಂದಿನ ವೀರಶೈವ ಸಮಾಜದಲ್ಲಿ ನಾಲ್ಕು ರೀತಿಯ ವ್ಯವಹಾರಗಳಿವೆ.

1) ಲಿಂಗತತ್ತ್ವದ ನೆಲೆಯಲ್ಲಿ ಮೇಲಿನ ಯಾವುದೇ ವ್ಯವಹಾರ ಇಲ್ಲದಿರುವುದು ಇವರ ಸಂಖ್ಯೆ ಈಗ ಅಪಾರವಾಗಿದೆ.

2) ಲಿಂಗತತ್ತ್ವದ ನೆಲೆಯಲ್ಲಿ ಮೇಲಿನ ಕೇವಲ, ಭಕ್ತಿ, ಗುರು, ಲಿಂಗ, ಆಚಾರ ಮಾತ್ರವಿದ್ದು, ಅಷ್ಟನ್ನೇ ಧರ್ಮವೆಂದು ತಿಳಿದಿರುವುಜದು.

3) ಲಿಂಗತತ್ತ್ವದ ನೆಲೆಯಲ್ಲಿ ಮೇಲಿನ ಕೇವಲ, ಭಕ್ತಿ, ಗುರು, ಲಿಂಗ, ವಿಚಾರ ಮಾತ್ರವಿದ್ದು, ಅಷ್ಟನ್ನೇ ಧರ್ಮವೆಂದು ತಿಳಿದಿರುವುದು.

4) ಲಿಂತತ್ತ್ವದ ನೆಲೆಯಲ್ಲಿ ಮೇಲಿನ ಕೇಲವ 'ವಿಚಾರ' ಮಾತ್ರವಿದ್ದು, ಶುಷ್ಕ ಮಾತಿನಲ್ಲೆ ಭಕ್ತಿ, ಗುರು, ಲಿಂಗ, ಆಚಾರ, ಮಾಡಿ ನಿಷ್ಪತ್ತಿ ಹೊಂದುವುದು. ಅಥವಾ ಪ್ರಯತ್ನಿಸಿ ಭೂಲೋಕದಲ್ಲರುವುದು.

ಇಂದಿನ ಕಾಲಕ್ಕೆ ಈ ನಾಲ್ಕು ರೀತಿಗಳಲ್ಲದೇ ಇನ್ನು ಅನೇಕ ರೀತಿಯ ಮೇಲಿನ ಸಂಬಂಧದ ನೆಲೆಗಳಲ್ಲಿ ವ್ಯವಹಾರಗಳಿದ್ದು, ವೀರಶೈವ ಧರ್ಮ ತನ್ನ ಸಂಪೂರ್ಣ ನೆಲೆಯನ್ನು ಕಂಡುಕೊಂಡಿಲ್ಲ. ಇವುಗಳು ಏನೇ ಇದ್ದರೂ ಸಹ ಈ ಪ್ರಬಂಧದಲ್ಲಿ ಲಿಂಗತತ್ತ್ವದ ಅಭಿವ್ಯಕ್ತತೆ, ಲಿಂಗತತ್ತ್ವದ ಅರಿವು, ಲಿಂಗತತ್ತ್ವದ ಅನುಭಾವಗಳ ವಿಚಾರದಲ್ಲಿ ವೀರಶೈವ ಧರ್ಮದ ಶಾಸ್ತ್ರ ಹಾಗೂ ಅನುಭಾವಗಳು ಇಷ್ಟಲಿಂಗ ತತ್ತ್ವದ ವಿಚಾರದಲಿಲ ಏನನ್ನೂ ಪ್ರತಿಪಾದಿಸಿದೆ ಎಂದು ತಿಳಿಯುವುದು ಸೂಕ್ತವಾಗಿದೆ.

ಇಷ್ಟಲಿಂಗತತ್ತ್ವದ ವಿಚಾರದಲ್ಲಿ 'ಶಾಸ್ತ್ರ' ವಿಚಾರಗಳು 'ಲಿಂಗಧಾರಣ ಸ್ಥಲ'ದಲ್ಲಿನ ಸಂಪೂರ್ಣ ಮಾಹಿತಿಗಳು (ಒಟ್ಟು 41 ಶ್ಲೋಕಗಳ ವಾಚ್ಯಾರ್ಥಗಳು) ಈ ಕೆಳಗೆ ಕೊಟ್ಟಿದೆ. ಈ ಸ್ಥಲ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಗಳಲ್ಲಿ 6ನೆಯ ಆಧ್ಯಾಯದಲ್ಲಿದೆ.

ಸ್ಪಟಿಕ ಶಿಲೆಯಿಂದ ರಚಿತವಾದ ಅಥವಾ ಶ್ರೀ ಶೈಲಾದಿ ಮಹಾಪರ್ವತ ಶಿಲೆಯಿಂದ ನಿರ್ಮಿಸಲಾದ ಚಂದ್ರಕಾಂತ ಶಿಲಾನಿರ್ಮಿತವಾದ ಅಥವಾ ನರ್ಮದಾ ನದಿಯಲ್ಲಿ ಸಮುದ್ಭೋತವಾದ

1. (ಹುಟ್ಟಿದ) ಒಂದು ಲಿಂಗವನ್ನು ಗುರು ಪರೀಕ್ಷಿಸಿ ತೆಗೆದು ಕೊಳ್ಳುತ್ತಾನೆ. ಸರ್ವ ಲಕ್ಷಣ ಸಂಪನ್ನವಾದ ಶುದ್ಧಗೊಳಿಸಲಾದ ಕರಪೀಠದಲ್ಲಿ ಸ್ಥಾಪಿತವಾದ ಅಭಿವ್ಯಕ್ತವಾದ (ಅಭಿಷೇಕಾದಿಗಳಿಂದ ಕೂಡಿದ) ಗಂಧ, ಪುಷ್ಪಾದಿಗಳಿಂದ ಪೂಜಿತವಾದ, ಮಂತ್ರದಿಂದ ಪವಿತ್ರವಾದ, ಯಾವ ಲಿಂಗವಿದೆಯೋ,

2. ಅದರಲ್ಲಿ ವಿಧಿಪೂರ್ವಕವಾಗಿ ಗುರುವು ಶೈವೀಕಲೆಯನ್ನು ಸಂಯೋಜಿಸಬೇಕು. ಶಿಷ್ಯನ ಪ್ರಾಣವನ್ನು ಆಕರ್ಷಿಸಿ ಆ ಲಿಂಗದಲ್ಲಿ ಪ್ರತಿಷ್ಠಾಪಿಸಬೇಕು. ಆ ಲಿಂಗವನ್ನು ಶಿಷ್ಯನ

3.ಪ್ರಾಣದಲಿಲ ಏಕಭಾವದಿಂದ ಸ್ಥಾಪಿಸಬೇಕು. ಈ ರೀತಿಯ ಕ್ರಮದಿಂದ ಗುರುವು ಲಿಂಗವನ್ನು ಶಿಷ್ಯನ

4. ಹಸ್ತದಲಿ ಸ್ಥಾಪಿಸಬೇಕು. ಈ ಪ್ರಾಣಲಿಂಗವನ್ನು ನಿನ್ನ ಪ್ರಾಣದಂತೆ ಧರಿಸು, ಎಂದೂ

5. ಎಲ್ಲಿಯೂ ದೇಹದಿಂದ ಅಗಲಿಸಬೇಡ. ಒಂದು ವೇಳೆ ಪ್ರಮಾದವಶಾತ್ ಲಿಂಗವು ದೇಹದಿಂದ ಭೂಮಿಯ ಮೇಲೆ ಬಿದ್ದರೆ, ಒಡನೆಯೇ ಮೋಕ್ಷ ಪ್ರಾಪ್ತಿಗಾಗಿ ಪ್ರಾಣವನ್ನು ಬಿಡು. (ದೀಕ್ಷೆಯಿಂದ

6. ಪಡೆದ ಇಷ್ಟಲಿಂಗವು ಪ್ರಾಣಕ್ಕಿಂತ ಮಿಗಿಲಾದುದು ಎಂಬುದು ಭಾವ) ಶಾಸ್ತ್ರವೇದ್ಯನಾದ ಗುರುವಿನಿಂದ ಈ ರೀತಿ ಸಂಬೋಧಿತನಾದ ಶಿಷ್ಯನು ಶಂಕರ ಲಿಂಗವನ್ನು ಪ್ರಾಣಯೋಗದವರೆವಿಗ ನಿರಂತರ ಧರಿಸಬೇಕು.

7. ಲಿಂಗಧಾರಣವು ಪುಣ್ಯಕರವಾಗಿದ್ದು, ಸರ್ವಪಾಪನಾಶಕವಾದದ್ದು ಎಂಬು ಸರ್ವಗಮರ್ಥ ವಿಶಾರದರಾದ ಮುನಿಜನರಿಂದ ಅಂಗೀಕೃತವಾಗಿದೆ.
8. ಸರ್ವಾರ್ಥ ಸಾಧಕವಾದ ಲಿಂಗಧಾರಣವು ಬಾಹ್ಯಾಭ್ಯಂತರವೆಂದು (ಒಳಹೊರಗೆಂದು) ಇರಡು ಬಗೆಯಾಗಿ ಮೋಕ್ಷಾತೇಕ್ಷಿಗಳಾದ ಮುನಿಗಳಿಂದ ಹೇಳಲ್ಪಟ್ಟಿದೆ.
9 ಶಿವಲಿಂಗವು (ಶಂಕರ ಲಿಂಗವು) ಪರಮ ಚಿದ್ರೂಪವು. ಸರ್ವಕಾರಣವಾಗಿ ಚಿತ್ತದಲ್ಲಿ ಯಥಾ ರೀತಿ ಧರಿಸುವುದರಿಂದ

- ವೀರಶೈವ ಧರ್ಮ 'ಶಾಸ್ತ್ರ'ವು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ನಿರೂಪಿತವಾಗಿದೆ. ಈ ಗ್ರಂಥದಲ್ಲಿ ಒಟ್ಟು 1,402 ಶ್ಲೋಕಗಳಿವೆ. ವೀರಶೈವಧರ್ಮದ ಅನುಭಾವವು ಕರ್ನಾಟಕ ಸರ್ಕಾರ ಪ್ರಕಟಿಸಿರುವ 'ಸಮಗ್ರ ವಚನ ಸಂಪುಟ' (15 ಸಂಪುಟಗಳು) ಗಳಲ್ಲಿದೆ. ಈ ಸಮಗ್ರವಚನ ಸಂಪುಟದಲ್ಲಿ ಒಟ್ಟು 23,500 ವಚನಗಳಿವೆ.

10. ಅಂತರಧಾರಣವೆಂದು ಉದಹರಿಸಲಾಗಿದೆ. ಪರಬ್ರಹ್ಮಮಹಾಲಿಂಗವು, ಚಿದ್ರೂಪವು, ಪರತತ್ವವು, ಶಿವಾಖ್ಯವೂ. (ಶಿವನಾಮಕವೂ) ವಿಶ್ವಕಾರಣವೂ, ವಿಶ್ವಕಾಲುಷ್ಯವಿಲ್ಲದ್ದೂ,
11. ನಿಷ್ಕಲವು (ನಿರವಯ), ನಿರ್ವಿಕಲ್ಪವೂ (ಅವೇದ್ಯ ತತ್ತ್ವವೂ) – ಸತ್ತಾನಂದ ಪರಿಸ್ಫೂರ್ತಿಯುಳ್ಳದ್ದು (ಸತ್ತು ಮುತ್ತು ಆನಂದಗಳ ದಿವ್ಯ ಸ್ಫರಣವೂ) ಪರಮ ಸಂತೋಷ ರೂಪ (ಸಮುಲ್ಲಾಸ) ಕಲಾಮಯವೂ, ಅಪ್ರಮೇಯವೂ (ಪ್ರಮಾಣಗಳಿಗೆ ಅತೀಕವಾದ)
12. ಅನಿರ್ದೇಶ್ಯವೂ (ವಾಣಿಗೆ ಅತೀತವಾದ) ಮುಮುಕ್ಷಗಳಿಗೆ ಉಪಾಸ್ಯವೂ ಆಗಿದೆ. ಆ ಪರಬ್ರಹ್ಮವೇ ಮಹಾಲಿಂಗವು, ಅದು ಪ್ರಪಂಚಕ್ಕೆ ಅತೀತವಾದುದು. ಅನ್ಯಯವಾದುದು (ಶಾಶ್ವತವಾದುದು), ಅದು ಎಲ್ಲ ಪ್ರಾಣಿಗಳ ಒಳಗೆ ಮೂರು ನೆಲೆಗಳಲ್ಲಿ ಗೋಚರಿಸುವಂತಹುದು ಆಗಿದೆ.
13. ಎಲ್ಲ ದೇಹಿಗಳ ಮೂಲಾಧಾರದಲ್ಲಿ (ಪೂರ್ವ ಹೃದಯದಲ್ಲಿ) ಮಧ್ಯಹೃದಯದಲ್ಲಿ ಭ್ರೂಮಧ್ಯರೂಪ (ಊರ್ಧ್ವ ಹೃದಯದಲ್ಲಿ) ಜ್ಯೋತಿರ್ಲಿಂಗವಾಗಿ ಯಾವಾಗಲೂ ಬೆಳಗುತ್ತದೆ.
14 ಅದನ್ನೇ ಆಗಮಜ್ಞರು ಪರಬ್ರಹ್ಮವೆನ್ನುತ್ತಾರೆ. ಅ ಪರಿಚ್ಛಿನ್ನವಾದ (ಅಖಂಡವಾದ) ಅವ್ಯಕ್ತವಾದ, ಸನಾತವಾದ, ಬ್ರಹ್ಮವಾದ ಅಂತಸ್ಥಲಲಿಂಗವು (ಅಂತರ ಲಿಂಗವು)
15. ಉಪಾಸನಾರ್ಥವಾಗಿ ತನ್ನ 'ಸ್ವ'ಮಾಯೆಯಿಂದ ಪರಿಚ್ಛಿನ್ನವಾಯಿತು (ಖಂಡಿತವಾಯಿತು).
16. ಅದು ಶಾಶ್ವತವಾದ "ಬ್ರಹ್ಮ ಲಿಂಗ"ವು. ಆದ್ದರಿಂದ ಸತ್ತಾನಂದ ಚಿದಾತ್ಮಕ ಮತ್ತು ಬೃಹತ್ ತತ್ತ್ವವಾದ ವಿಶ್ವ ಸೃಷ್ಟಿಸುವ ಸಾಮರ್ಥ್ಯವುಳ್ಳ (ಬೃಂಹಣತ್ವಾತ್) ಪರಬ್ರಹ್ಮ ಶಬ್ದಕ್ಕೆ ಸಾಮರ್ಥ್ಯವುಳ್ಳ (ಬ್ರಹ್ಮ ಶಬ್ದಾಭಿದೇಯಕರ) ವಿಷಯವಾದದನ್ನು 'ಲಿಂಗ'ವೆಂದು ಹೇಳಲಾಗಿದೆ. (ಅಭಿದಾನವಾಗಿದೆ).
17. ಆಧರ, ಹೃದಯ ಅಥವಾ ಭ್ರೂಮಧ್ಯದಲ್ಲಾಗಲೀ, ನಿರಂತರವಾದ ಜ್ಯೋತಿರ್ಲಿಂಗಾನು ಸಂಧಾನವನ್ನೂ ಅಂತರಲಿಂಗಧಾರಣವೆಂದು ಹೇಳಲಾಗಿದೆ. ಆಧಾರ ಚಕ್ರದಲ್ಲಿ ಸುವರ್ಣಕಾಂತಿಯಿಂದ ಹೃದಯದಲ್ಲಿ (ಅನಾಹತ ಚಕ್ರದಲ್ಲಿ) ಹವಳದ ಕಾಂತಿಯಿಂದ, ಭ್ರೂಮಧ್ಯದಲ್ಲಿ (ಅಜ್ಞಾಚಕ್ರದಲ್ಲಿ) ಸ್ಫಟಿಕಚ್ಛಮೆಯಿಂದ ಹೊಳೆಯುವ
19. ಲಿಂಗವನ್ನು ಯೋಗಿಯು ಭಾವಿಸಬೇಕು. ಅಂತರಲಿಂಗದ ಧಾರಣವು ನಿರುಪಾಧಿಕವೆಂದು ಹೇಳಲ್ಪಟ್ಟಿದೆ.

20. ಅದು 'ಬಾಹ್ಯ'ಲಿಂಗಧಾರಣೆಗಿಂತ ಕೋಟಿ ಪಾಲು ಉತ್ತಮ (ಏೀಗಿಲಾದುದ್ದು). ಯಾರು ಹೃತ್ಕಮಲದಲ್ಲಿ ಚಿದ್ರೂತವಾದ 'ಈಶ್ವರ ಸ್ವರೂಪದ "ಲಿಂಗ"ವನ್ನು ಧರಿಸುತ್ತಾರೆಯೋ ಅವರಿಗೆ ಘೋರಸಂಸಾರ ಮಂಡಲದಲಿಲ ಪುನರಾವೃತ್ತಿಯಿಲ್ಲ (ಪುನಃ ಜನ್ಮವೆತ್ತಬೇಕಾಗಿಲ್ಲ).
21. ಅಂತರ್ಲಿಂಗಾನು ಸಂಧಾನವೂ, ಆತ್ಮವಿದ್ಯಾಪರಿಶ್ರಮವೂ, ಮತ್ತು ಗುರುಸೇವಾಸಕ್ತಿಯೂ,
22. ಇವು ಮೋಕ್ಷ ಸಂಪದಕ್ಕೆ ಕಾರಣವಾಗಿದೆ. ವೈರಾಗ್ಯ ಜ್ಞಾನಯುಕ್ತ ಸ್ಥಿರಚಿತ್ತವುಳ್ಳ ಯೋಗಿಗೆ ಅಂತರ್ಲಿಂಗಾನು ಸಂಧಾನದಲ್ಲಿ ರುಚಿ, ಆದರೆ ಬಾಹ್ಯ (ಲಿಂಗ)ದಲಿಲ ಉಂಟಾಗುವುದಿಲ್ಲ.
23. ಬ್ರಹ್ಮ, ವಿಷ್ಣು, ಮತ್ತು ರುದ್ರ ಲೋಕಪಾಲಕರಾದ ವಾಸವಾದ್ಯರುಗಳು
24. (ಇಂದ್ರಾದಿಗಳು) ಮುನಿಗಳು, ಸಿದ್ಧರು, ಗಂಧರ್ವರು, ದಾನವರು, ಮಾನವರು, ಇವರೆಲ್ಲರೂ ಜ್ಞಾನಯೋಗಗಳಿಂದ ಸರ್ವಕಾರಣವಾದ ಪರಮಾನಂದ ಲಕ್ಷಣ ಲಿಂಗವನ್ನು ಹೃದಯಾರವಿಂದದಲ್ಲಿ ಕಾಣುತ್ತಾರೆ.
25. ಆದ್ದರಿಂದ ಸರ್ವಪ್ರಯತ್ನಗಳಿಂದ ಉತ್ತಮವಾದ ಶಂಕರ ಲಿಂಗವನ್ನು ವಿದ್ವಾಂಸನು ಸರ್ವಕ್ಲೇಶಗಲ ಮುಕ್ತಿಗಾಗಿ ಅಂತರಂಗದಲ್ಲಿಯೇ ವಿಭಾವಿಸುತ್ತಿರಬೇಕು (ವಿಭಾವಯೇತ್).
26. ಅಂತರಂಗದಲ್ಲಿ (ಅಂತರದಲ್ಲಿ) ಲಿಂಗವನ್ನು ಧರಿಸುವುದಕ್ಕೆ ಅಶಕ್ತನಾಗಲಿ ಅಥವಾ ಶಕ್ತನಾಗಲಿ ಆದರೆ ಬಾಹ್ಯಲಿಂಗವನ್ನು ಅಂತರಂಗದ ಲಿಂಗಸ್ವರೂಪವೆಂದು (ಅಂತರ್ಲಿಂಗ ಸ್ವರೂಪ) ನಿಶ್ಚಯದಿಮದ ಧರಿಸತಕ್ಕದ್ದು.
27. ಆದರೆ ಲಿಂಗವು ಸ್ಥೂಲ, ಸೂಕ್ಷ್ಮ, ಪರಾತ್ಪರ (ಕಾರಣ)ವೆಂದು ಮೂರು ವಿಧವಾಗಿದೆ. ಯಾವುದನ್ನು ಬಾಹ್ಯ ದೇಹದಲ್ಲಿ ಧರಿಸಬೇಕಾಗಿದೆಯೋ ಅದೇ ಸ್ಥೂಲವಾದ "ಇಷ್ಟಲಿಂಗವು"
28. ಭಾವನಾತೀತವಾದ ಅವ್ಯಕ್ತವಾದ (ರೂಪಾದಿಗಳಿಲ್ಲದ) ಪರಬ್ರಹ್ಮ ಶಿವನಾಯಕವಾದ, ಈ ಇಷ್ಟಲಿಂಗವನ್ನು ಸಾಕ್ಷಾತ್ ಅನಿಷ್ಟ ಪರಿಹಾರಕವೆಂದು ಪಂಡಿತನು (ಬಂಧನು) ಅದನ್ನು ಯಾವಾಗಲೂ ಶರೀರದ ಮೇಲೆ ಅವಧಾನದಿಂದ (ಜಾಗ್ರತೆಯಿಂದ) ಧರಿಸಬೇಕು.
29. ತಲೆಯ ಮೇಲಾಗಲಿ, ಕಂಠಸ್ಥಾನದಲ್ಲಾಗಲಿ, ಕಂಕುಳದಲ್ಲಾಗಲಿ, ಎದೆಯ ಮೇಲಾಗಲಿ, ಉದರದ ಮೇಲಾಗಲಿ,
30. ಅಥವಾ ಅಂಗೈ ಮೇಲಾಗಲಿ, "ಈಶ್ವರ" ರೂಪವಾದ ಲಿಂಗವನ್ನು ಧರಿಸಬೇಕು. ನಾಭಿಯ ಕೆಳಗೆ, ಲಿಂಗಧಾರಣವು ಪಾತಕ್ಕೆ ಕಾರಣವು, ಜಡೆಯ ತುದಿಯಲ್ಲಿ, ತಿಗದ ಮೇಲೆ, ಮಲವಿಸರ್ಜನ ಸ್ಥಾನದಲ್ಲಿ ಧರಿಸಬಾರದು.
31. ಲಿಂಗಧಾರಿಯು ಸದಾ ಶುದ್ಧನು, ಮನೋಹರವಾದ ನಿಜಲಿಂಗವನ್ನು ಹಸ್ತದಲ್ಲಿ (ಕರಪೀಠದಲ್ಲಿ) ಸಮಾಹಿತನಾಗಿ (ಒಂದೇ ಮನದದವನಾಗಿ) ಗಂಧ ಪುಷ್ಪಗಳಿಂದ ಅರ್ಚಿಸಬೇಕು. ಸಕಲ ವೀರಶೈವ ಮುಮುಕ್ಷುಗಳಿಗೆ ನಿರಂತರ ಬಾಹ್ಯಪೀಠದಲ್ಲಿ ಅರ್ಚಿಸುವುದಕ್ಕಿಂತಲೂ,
32. ಕರಪೀಠದಲ್ಲಿ ಅರ್ಚಿಸುವುದೇ (ಪೂಜೆಯೇ) ಶ್ರೇಷ್ಠವಾದುದ್ದು, ಬ್ರಹ್ಮ, ವಿಷ್ಣು, ಇತ್ಯಾದಿ ದೇವತೆಗಳು, ಗೌತಮಾದಿ ಮುನಿಗಳು ವಿಶೇಷವಾಗಿ ಉತ್ತಮಾಂಗದಲ್ಲಿ (ಶಿರದಲ್ಲಿ) ಸದಾಲಿಂಗವನ್ನು ಧರಿಸುವರು.
33. ಲಕ್ಷಕೊದಲಿಂದ ಶಿವಭಕ್ತಿ ಭಾವುಕರಾದ ಸಕಲ ಶಕ್ತಿಯರು ಶಿವಲಿಂಗವನ್ನು ಅಹರ್ನಿಶ (ಹಗಲು ರಾತ್ರಿ) ನೊಸಲಿನ ಮೇಲೆ ಧರಿಸುತ್ತಾರೆ.
34. ವೇದ ಶಾಸ್ತ್ರ ಪುರಾಣಗಳಲ್ಲಿ ಕಾಮಿಕಾದಿ ಆಗಮಗಳಲ್ಲಿ ವೀರಶೈವನಿಗೆ ಲಿಂಗಧಾರಣವು ನಿಶ್ಚಿತವಾಗಿ ಹೇಳಿದೆ.

36. ಋಗ್ವೇದದಲ್ಲಿ  ಈ ರೀತಿ ಹೇಳಲಾಗಿದೆ. ಎಲೈ ಬ್ರಹ್ಮಾಧಿಪತಯೇ ನಿನ್ನ ವಿಶ್ವವ್ಯಾಪಕ ಲಿಂಗವು ಪವಿತ್ರವಾದುದು. ಆದ್ದರಿಂದ ಶೈವರಿಗೆ ದೋಷರಹಿತವಾದ (ಅನಾಯವಾದ) ಪವಿತ್ರವಾದ (ಪಾವನವಾದ) ಆ ಲಿಂಗವನ್ನು ಧರಿಸಲು ಯೋಗ್ಯವಾದುದು.
37. ಸೃಷ್ಟಿಕರ್ತ 'ಬ್ರಹ್ಮನ' (ಬ್ರಹ್ಮಣಃ) ಪತಿಯ 'ಈಶ್ವರನು'. ಈಶ್ವರನನ್ನು 'ಬ್ರಹ್ಮ ಲಿಂಗ'ವೆಂದು ಹೇಳಲಾಗಿದೆ. ಆ ಕಾರಣ ಆ ಲಿಂಗವು ಪವಿತ್ರವೆಂದು (ಪಾವನವೆಂದು) ಪ್ರಸಿದ್ಧವಾದುದು.  ಅದರ ಸಂಪರ್ಕದಿಂದ ತನು ಶುಚಿಯಾಗುತ್ತದೆ.
38. ತಪವಿಲ್ಲದ ದೇಹಿಯು (ಆತಪ್ತತವವು) ಅಜ್ಞನು, ಅರಿಪಕ್ವ ರಹಿತನು, ಸಂಸ್ಕಾರ ವರ್ಜಿತನೂ,
39. ದೀಕ್ಷಾರಹಿತನೂ (ದೀಕ್ಷೆ ಇಲ್ಲದವನೂ) ಉತ್ತಮವಾದ ಲಿಂಗವನ್ನು ಧರಿಸಬಾರದು.
ರುದ್ರನೇ ಯಾರ ನಿನ್ನ ಲಿಂಗರೂಪ ದೇಹವು ಮಂಗಲಮಯವೂ (ಅಘೋರಾ) ಶಾಂತವೂ (ಶಿವ), ಪಾಪರಹಿತವೂ (ಅಪಾಪ) ಪ್ರಕಾಸವೂ ಎಂದು ಯಾವ ಕಾರಣ ಯಜುರ್ವೆದದಿಂದ ಹೇಳಿರುವುದೋ ಅದೇ ಕಾರಣ ಶೈವನು ಪಾಪರಹಿತನು (ಅಘವರ್ಜಿತಃ).
40. ಯಾವನು ಲಿಂಗಧಾರಿಯೋ, ನಿಯತಃತರಾತ್ಮನು (ನಿರ್ಮಲಾಂತಃಕರಣನೋ) ನಿತ್ಯ ಶಿವಾರಾಧನ ಬದ್ಧ ಚಿತ್ತನಾಗಿ ಅವನು ದೋಷನಾಶಕ್ಕಾಗಿ ಮನೋಹರವಾದ ಭಸ್ಮವನ್ನು ವಿಧಿಗನುಸಾರ (ಯಥಾಪ್ರಯೋಗಂ) ಧರಿಸಬೇಕು.

ಸಾಧಕನ ಆಧ್ಯಾತ್ಮ ವ್ಯಕ್ತಿತ್ವಕ್ಕೆ ಈ 41 ಪ್ರಮೇಯ ಸ್ವರೂಪ ಶ್ಲೋಕಗಳ ವಾಚ್ಯಾರ್ಥವನ್ನು ಈ ಕೆಳಗೆ ಅನ್ವಯ ಮಾಡಲಾಗಿದೆ. ಈ ಪ್ರಮೇಯಗಳ ಅರ್ಥವನ್ನು ಆಯಾ ದೇಹದ ಸ್ಥಾನಗಳಲ್ಲಿ ಅನ್ವಯಮಾಡಬೇಕು.

ಇಷ್ಟಲಿಂಗ : ಶಾಸ್ತ್ರ, ಅನುಭಾವ :–
ಸಾಧಕನ ದೇಹದಲ್ಲಿರುವ, ನಾನಾ ರೀತಿಯ ತತ್ತ್ವ; ಗುಣಾಧಾರಿತವಾಗಿ, ನಾನಾ ಹೆಸರುಗಳಿಂದ ಇಷ್ಟಲಿಂಗೋಪಾಸನಾ ಕ್ರಮದ ತಂತ್ರ" ಶಾಸ್ತ್ರವಾಗಿ ನಿರೂಪಿತವಾಗಿದೆ. ಇದು ವೀರಶೈವ ಧರ್ಮ' ಶಾಸ್ತ್ರ ಹಾಗೂ ಅನುಭಾವ' ಸಾಹಿತ್ಯದಲ್ಲಿ ಸಮಸಮನಾಗಿ ನಿರೂಪಿತವಾಗಿದೆ.

ಸಾಧಕನ ಆಧ್ಯಾತ್ಮ ವ್ಯಕ್ತಿತ್ವದ
ಚಕ್ರಸ್ಥಾನಗಳು

| ಚಕ್ರಗಳು | ಪೌರಾಣಿಕ ಹೆಸರುಗಳು ಅಥವಾ ತಾತ್ವೀಕ ಹೆಸರುಳಗು |
|---|---|
| 10 ಅಣು | ಸಹಜಲಿಂಗ, ಶರಣ, ನಿಜ, ಶಿವಯೋಗ, "ಅನಾದಿ ಜಂಗಮ" |
| 9 ಪಶ್ಚಿಮ | ನಿಃಶೂನ್ಯಲಿಂಗ, ನಿರಂಜನ, ಚಿದಂಬರ |
| 8 ಶಿಖಾ | ಶೂನ್ಯಲಿಂಗ |
| 7 ಸಹಸ್ರಾರ | ನಿಷ್ಕಲಲಿಂಗ, ಪರಶಿವ, ಪರಬ್ರಹ್ಮ, ಮಹಾದೇವ, ನಿರಾಕಾರ, ಪರಮಾತ್ಮ, ಪರಮೇಶ್ವರ, ಅನಾದಿ, ಗುರು, ದೇವಾದಿದೇವ, ಸಾಂಬ, ಸ್ಥಾವರ, ಶಂಭು "ಪುರುಷೋತ್ತಮ", ಹನ್ನೆರಡನೆಯ ಶತಮಾನದ ಶರಣರ ವಚನಾಂಕಿತಗಳು "ಕೂಡಲ" ಸಂಗಮದೇವಾ, ಇತ್ಯಾದಿಗಳು) 'ಜ್ಞಾನಜಂಗಮ' (ಜಂಗಮ) (ತತ್ತ್ವ) |
| 6 ಆಜ್ಞಾ | ಸಕಲ–ನಿಷ್ಕಲಲಿಂಗ, ಶಿವ, ಶಂಕರ, ಶಂಭು, ರುದ್ರ, ಮಹೇಶ್ವರ, ಆದಿ, ಲಿಂಗ, ದೇವ, ಜ್ಞಾನಜಂಗಮ, ಸ್ಥಾವರ, ಮುಕ್ಕಣ, ಬಾಲಚಂದ್ರ, ವಿಭು, ಶರ್ವ, ಸಾಕಾರಪರಮಾತ್ಮ, ಶಕ್ತಿ ಸಮನ್ವಿತ, ಸರ್ವಜ್ಞ, ಸರ್ವಶಕ್ತಿ, ಬ್ರಹ್ಮಣಿ, ಅಕ್ಷರ "ಪುರುಷ", ತ್ರಿಣಯನ, (10 ತತ್ತ್ವಗಳು) |

| | |
|---|---|
| 5 ವಿಶುದ್ಧಿ | ನೀಲಕಂಠ |
| 4 ಅನಾಹತ | ಸಕಲ ಲಿಂಗ, ಈಶ್ವರ, ವಿಷ್ಣು, "ಕರಪುರುಷ", ಜೀವಾತ್ಮ ಆದಿ ಜಂಗಮ, ಜಂಗಮ (25 ತತ್ತ್ವಗಳು) |
| 3 ಮಣಿಪೂರಕ | |
| 2 ಸ್ವಾಧಿಷ್ಠಾನ | ಬ್ರಹ್ಮ, ವಿಶ್ವಯೋನಿ, ಚತುರಾನನ, ಪ್ರಥಮ ಪುತ್ರ |
| ಆಧಾರ | |

ಸಾಧಕನ ಬೆನ್ನುಹುರಿ

ಸಾಧಕನ ಆಧ್ಯಾತ್ಮ ವ್ಯಕ್ತಿತ್ವ

ಈ ಪೌರಾಣಿಕ, ಹಾಗೂ ತತ್ತ್ವಗಳ ಹೆಸರುಗಳು, ಸಾಧಕನಲ್ಲಿಯ ಆಯಾ ಲಿಂಗತತ್ತ್ವದ ಹೆಸರುಗಳಾಗಿವೆ. ಹಾಗೂ ಮೂಲ ಲಿಂಗತತ್ತ್ವದ ನೆಲೆಯ ಚಿತ್ಕಳಾ ಸ್ವರೂಪದ (ಶೈವೀಕಲೆ) 36 ತತ್ತ್ವಗಳ ನೆಲೆಯಲ್ಲಿ ಸಾಧಕನ ಆಧ್ಯಾತ್ಮಿಕ ವ್ಯಕ್ತಿತ್ವದಲಿಲ ಪ್ರಜ್ಞಾ ವಿಶೇಷಗಳಾಗಿ ಪ್ರತಿಷ್ಠಿತವಾಗಿದೆ. "ಇಷ್ಟಲಿಂಗ ತತ್ತ್ವ"ವು ಇವೆಲ್ಲಾ ತತ್ತ್ವಗಳನ್ನು ಒಳಗೊಂಡಿದೆ. ಸಾಧಕನು ತನ್ನ "ಚಿತ್ಕಳಾ ಸ್ವರೂಪ" ಇಷ್ಟಲಿಂಗದ ಪೂಜನರಿಂದ ತನ್ನಲ್ಲಿರುವ ಎಲ್ಲಾ ರೀತಿಯ ಪ್ರಜ್ಞಾವಿಶೇಷಗಳನ್ನು ದಾಟಿ ಶಿವಾತ್ಮಕವಾಗುವಿಕೆಯೇ ದೃಷ್ಟಿಯೋಗ ಮೂಲದ 'ಶಿವಯೋಗ'ವಾಗಿದೆ.

ಇಷ್ಟಲಿಂಗ ಅನುಭಕ್ಕೆ ಇನ್ನು ವೀರಶೈವಧರ್ಮದ ಅನುಭಾವ ಸಾಹಿತ್ಯವಾದ ವಚನ ವಾಙ್ಮಯದಲ್ಲಿ ಈ 'ಇಷ್ಟಲಿಂಗ ತತ್ತ್ವ'ದ ವಿಚಾರದಲಿಲ ಅಭಿಪ್ರಾಯಗಳನ್ನು ಕೆಳಗೆ ಕೊಡಲಾಗಿದೆ.

1. ಜಗದಗಲ ಮುನಿಲಗಲ ಮಿಗೆಯಗಲ ನಿಮ್ಮಗಲ!
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ, ಬ್ರಹ್ಮಾಂಡದಿಂದತ್ತತ್ತ
ನಿಮ್ಮ ಶ್ರೀಮಕುಟ! ಅಗಮ್ಯ ಅಗೋಚರ ಅಪ್ರತಿಯ ಲಿಂಗವೆ,
ಕೂಡಲ ಸಂಗಮ ದೇವಯ್ಯಾ, ಎನ್ನ ಕರಸ್ಥಳಕ್ಕೆ ಬಂದು
ಚುಳುಕಾದಿರಯ್ಯಾ!!

- ಬಸವಣ್ಣನವರು.

ಶಾಸ್ತ್ರೀಯ ವಿಚಾರವಾದ "ಲಿಂಗತತ್ತ್ವವು" ಹೇಗೆ ಇಷ್ಟಲಿಂಗ ಸ್ವರೂಪವಾಗಿದೆ ಎಂಬ ವಿಚಾರವನ್ನು ಕಾವ್ಯಮಯವಾಗಿ ಬಸವಣ್ಣನವರು ಪ್ರತಿಪಾದಿಸಿದ್ದಾರೆ. ಕಾವ್ಯದ ಹಿಂದಿನ ಕವಿತಾ ಚಾತುರ್ಯದ ಹಿಂದೆ ಶ್ರೇಷ್ಠವಾದ ಲಿಂಗತತ್ತ್ವವಿದೆ. ಇಲ್ಲಿ ಕೂಡಲಸಂಗಮ ದೇವಾ ಎಂಬ ವಚನಾಂಕಿತವು ಸಾಕಾರ, ನಿರಾಕಾರ ಏಕೋದೇವನಾದ ಪರಮಾತ್ಮ ತತ್ತ್ವವಾಗಿದೆ. 'ನಿಷ್ಕಲ ಲಿಂಗ'ವಾಗಿದೆ. (ಸಹಸ್ರಾರದ ಅನುಭಾವವಾಗಿದೆ.) (ಕೆಳಗಿನ 9ನೇ ವಚನವನ್ನು ನೋಡಿ, ಅಂತರಂಗದಲ್ಲಿ ಅರಿವಾದೇನಯ್ಯಾ

- ಬಸವಣ್ಣನವರು.

2. ರೂಪನೆಕಂಡರು, ನಿರೂಪನೆ ಕಾಣರು.
ತದುವನೆಕಂಡರು, ಅನುವನೆ ಕಾಣರು.

ಆಚಾರವನೆ ಕಂಡರು, ವಿಚಾರವನೆ ಕಾಣದು
ಗೊಹೇಶ್ವರ ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು.
–ಅಲ್ಲಮಪ್ರಭುಗಳು

ಲಿಂಗತತ್ತ್ವದ ಅಭಿವ್ಯಕ್ತತೆ, ಲಿಂಗತತ್ತ್ವದ ಅರಿವು, ಲಿಂಗತತ್ತ್ವದ ಆಚಾರ, ಲಿಂಗತತ್ತ್ವದ ಅನುಭಾವವೇ ಶ್ರೇಷ್ಠನಾದ 'ಮಾನವ ಧರ್ಮ'ವಾಗಿದೆ. ವೀರಶೈವಧರ್ಮವಾಗಿದೆ. ಇಷ್ಟಲಿಂಗೋಪಾಸನೆಯ ನೆಲೆಯಾಗಿದೆ.

3. ಎಳ್ಳಿಂಗೆ ಪರಿಮಳದ ಕಟ್ಟಿದಲ್ಲದೆ,
ಎಣ್ಣೆಗೆ ಪರಿಮಳವೇದಿಸದು
ಪ್ರಾಣಲಿಂಗ ಸಂಬಂಧವಾಗದು,
ಇದು ಕಾರಣ ಗೊಹೇಶ್ವರ ಲಿಂಗದಲ್ಲಿ
ಇಷ್ಟಲಿಂಗ ಸಂಬಂಧಿಯಾದಲ್ಲದೆ
ಪ್ರಾಣಲಿಂಗ ಸಂಬಂಧಿಯಾಗಬಾರದು ಕಾಣಾ ಸಿದ್ಧರಾಮಯ್ಯ.
– ಅಲ್ಲಮಪ್ರಭುಗಳು.

ಇಷ್ಟಲಿಂಗದ ದೃಷ್ಟಿಯೋಗದ ಅನುಸಂಧಾನದಿಂದ ಸಾಧಕನು ಅಂತರಂಗದ ಅಂತರ್ಮುಖಿಯಾದ ಪ್ರಾಣಲಿಂಗ ಸಂಬಂಧಿಯಾಗುವ ಕ್ರಮವನ್ನು ಪ್ರತಿಪಾದಿಸಿದೆ.

4. ಭವವುಳ್ಳನ್ನಕ್ಕರ ಧಾವತಿಮಾಣದು,
ಶರೀರ ಉಳ್ಳನ್ನಕ್ಕರ ಅವಸ್ಥೆಮಾಣದು
ಗೊಹೇಶ್ವರನೆಂಬ ನೆನಹುಳ್ಳನ್ನಕ್ಕರ
ಲಿಂಗವೆಂಬುದ ಬಿಡಲಾಗದು.
– ಅಲ್ಲಮಪ್ರಭುಗಳು.

ಇಲ್ಲಿ ವಚನಾಹಿತವಾದ ಗೋಹೇಶ್ವರನು ನಿಷ್ಕಲ ಲಿಂಗವಾಗಿದೆ.

5. ಶ್ರುತಿತತಿಗಳ ಶಿರದ ಮೇಲೆ ಒಪ್ಪುತ್ತಿಪ್ಪ
ಅತ್ಯತಿಷ್ಠದ್ದಶಾಂಗುಲದ ಕಂಡೆನಯ್ಯಾ!
ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ
ತ್ರಿಣಯನ ಮೂರ್ತಿಯ ಕಂಡೆನಯ್ಯ!
ವಾಙ್ಮನಕ್ಕೆ ಗೋಚರವಾದ ನಿರವಯ ಬ್ರಹ್ಮವ
ಕಂಡೆನಯ್ಯ! ನಿತ್ಯನೇಕೊರುದ್ರವ ದ್ವಿತೀಯನ
ಕಂಡೆನಯ್ಯ! ಎನ್ನ ಕರಸ್ಥಲದೊಳಗೆ" ಮಹಾದಾನಿ
ಸೊಡ್ಡಳನ" ಕಂಡೆನಯ್ಯಾ!
– ಸೊಡ್ಡಳಬಾಚರಸ

“ಲಿಂಗತತ್ತ್ವ”ದ ಅಭಿವ್ಯಕ್ತತೆಯನ್ನ ವಚನ ವಿಷದಪಡಿಸಿ, ಅದು ಹೇಗೆ ಇಷ್ಟಲಿಂಗತತ್ತ್ವವಾಗಿದೆ ಎಂದು ಸ್ಪಷ್ಟಪಡಿಸುತ್ತದೆ.

6. ಅಯ್ಯಾ, ತಾತಾಳ ವಿತ್ತತ್ತ, ಶ್ರೀ ಪಾದವತ್ತತ್ತ,
ಬ್ರಹ್ಮಾಂಡವಿತ್ತಿತ್ತ, ಮಣಿಮುಕುಟದತ್ತತ್ತ
ಅಯ್ಯಾ, ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ,
ಚೆನ್ನಮಲ್ಲಿಕಾರ್ಜುನಯ್ಯಾ, ನೀನೆನ್ನ ಕರಸ್ಥಲಕ್ಕೆ ಬಂದು
ಚುಳುಕಾದಿರಯ್ಯಾ!
– ಅಕ್ಕಮಹಾದೇವಿ.

‘ಲಿಂಗತತ್ತ್ವ’ದ ವಿಚಾರವನ್ನು ಶಾಸ್ತ್ರೀಯವಾಗಿ ಕಾವ್ಯಮಯವಾಗಿಸಿ ಈ ವಚನ ರಚನೆಯಾಗಿದೆ. ಹಾಗೆಯೇ ಈ ಲಿಂಗತತ್ತ್ವವೇ ಇಷ್ಟಲಿಂಗ ಸ್ವರೂಪವಾಗಿ ಸಾಧಕನಿಗೆ ತನ್ನ ಸಾಧನೆಗೆ ದೊರಕಿದೆ ಎಂಬ ವಿಚಾರವೂ ಸಹ ಈ ವಚನದಲ್ಲಿ ಪ್ರತಿಪಾದಿತವಾಗಿದೆ.

7. ಕಾಣಬಾರದ ಲಿಂಗವು ಕರಸ್ಥಲಕ್ಕೆ ಬಂದರೆ
ಎನಗಿದು ಸೋಜಿಗ, ಅಹುದೆನಲೆಮ್ಮನು,
ಅಲ್ಲನೆಮ್ಮನು, ಗೊಹೇಶ್ವರ ಲಿಂಗ ನಿರಾಳ
ನಿರಾಕಾರ ಬಯಲು ಆಕಾರವಾದರೆ.
– ಅಲ್ಲಮಪ್ರಭುಗಳು.

ಲಿಂಗತತ್ತ್ವವು ನಿಷ್ಕಲ, ನಿರಾಕಾರ, ಘನ ಮತ್ತು ಪರಿಪೂರ್ಣ, ಬಯಲು ಸ್ವರೂಪದ ನಿರಾಳಸ್ಥಿತಿ, ಅಂತಹ ಲಿಂಗತತ್ತ್ವವು ಸಾಕಾರವಾಗಿ ಇಷ್ಟಲಿಂಗ ತತ್ತ್ವವಾಗಿ ಕರಸ್ಥಳಕ್ಕೆ ಬಂದಿದೆ ಎಂದು ವಚನ ತನ್ನ ಅಭಿಪ್ರಾಯವನ್ನು ಪ್ರತಿಪಾದಿಸುತ್ತದೆ.

8. ಸಾಕಾರವಿಡಿದರ್ಚನೆ ಪೂಜನೆಯ ಮಾಡುವುದಲ್ಲದೆ, ನಿರಾಕಾರ ನಂಬಲಾಗದು. ‘ಶ್ರೀ ಗುರುಲಿಂಗವು’
ಪ್ರಾಣಲಿಂಗವನು ಕರಸ್ಥಲದ್ಲಲಿ ಬಿಜಯಂಗೈಸಿ
ಕರುಣಿಸಿದ ಬಳಿಕ, ವಜ್ರದಲ್ಲಿ ಬಯಲನರಸುವರೇ
ಉರಿಲಿಂಗಿಪೆದ್ದಿಪ್ರಿಯ ವಿಶ್ವೇಶ್ವರಾ?
– ಉರಿಲಿಂಗ ಪೆದ್ದಿಗಳು.

ನಿರಾಕಾರತತ್ತ್ವ ಸ್ವರೂಪದ ನಿಷ್ಕಲ ಲಿಂಗತತ್ತ್ವವನ್ನು ಅರಿತು ‘ಅದೇ’ ಆಗಬೇಕಾದರೆ, ಆ ನಿರಾಕಾರತತ್ತ್ವದ ಸಾಕಾರತತ್ತ್ವವನ್ನು ಪೂಜಿಸಿ, ತದನಂತರದಲ್ಲಿ ನಿರಾಕಾರ ತತ್ತ್ವವಾಗ ಬೇಕಾದ ಸಂದರ್ಭಗಳಿವೆ. ಈ ವಚನದಲ್ಲಿ ಪ್ರಯೋಗವಾಗಿರುವ ಶ್ರೀ ಗುರುಲಿಂಗ ಅಂತರಂಗ, ಬಹಿರಂಗಗಳ ವ್ಯಾಖ್ಯಾನಗಳಾಗಿವೆ. ಸಾಧಕನ ಅಂತರಂಗದಲ್ಲಿರುವ ತ್ರಿವಿಧ ತತ್ತ್ವಗಳೇ ಗುರು, ಲಿಂಗ, ಜಂಗಮ, ತತ್ತ್ವಗಳೇ ಸಾಧಕನ ಸಹಸ್ರಾರ, ಆಜ್ಞಾ, ಹಾಗೂ ಅನಾಹತ್ಮ ಚಕ್ರಗಳಲ್ಲಿರುವ ನಿರಾಕಾರ ಪರಮಾತ್ಮ, ಸಾಕಾರ ಪರಮಾತ್ಮ ಹಾಗೂ ಜೀವಾತ್ಮ

ತತ್ತ್ವಗಳಾಗಿವೆ. ಹಾಗೆಯೇ ಬಹಿರಂಗದಲ್ಲಿ (ಸಾದಕನಿಗೆ) ಶ್ರೀ ಗುರು ಲಿಂಗ, ಶಿವಲಿಂಗ, ಜಂಗಮಲಿಂಗಗಳ ಸ್ವರೂಪದ್ಲಲಿ ಅದೇ ತ್ರಿವಿಧಗಳು ಗುರುತತ್ತ್ವವಾಗಿ, ಇಷ್ಟಲಿಮಗವಾಗಿ, ಜ್ಞಾನಜಂಗಮನಾಗಿ ಸಾಧಕನಿಗೆ ದೊರಕುತ್ತದೆ. ಹೀಗೆ ಗುರುತತ್ತ್ವ ಸ್ವರೂಪದ ಬಹಿರಂಗದಲ್ಲಿನ (ಸಾಧಕನಿಗೆ) ಶ್ರೀ ಗುರುಲಿಂಗವು ದೀಕ್ಷಾ ಮುಖಾಂತರ ಸಾಧಕನಿಗೆ ಸಾಧಕನ ಪ್ರಾಣಲಿಂಗವನ್ನು ಇಷ್ಟಲಿಂಗ ಸ್ವರೂಪದಲ್ಲಿ ತಂದು (ಆಯತ) ಕೊಡುತ್ತಾನೆ. ಈ ಇಷ್ಟಲಿಂಗವು "ಘನವಾದ" ಲಿಂಗತತ್ತ್ವವನ್ನು ಪ್ರತಿಪಾದಿಸುವುದರಿಂದ, ಅದನ್ನು ಉಪಮಾನ ರೂಪವಾಗಿ ವಜ್ರದ್ಲಲಿರುವ ಬಯಲು ಸಾಧ್ಯವಿಲ್ಲ. ಕಾರಣ, ಈ ವಿಶ್ವದಲಿಲ ಅತ್ಯಂತ ಘನವಾದ ವಸ್ತುವೇ ವಜ್ರವಾಗಿದೆ. ವಜ್ರವನ್ನು 'ಘನ' ಮತ್ತು 'ಪರಿಪೂರ್ಣ' 'ಲಿಂಗತತ್ತ್ವ'ವನ್ನು ಪ್ರತಿಪಾದಿಸಲು ಉಪಯೋಗ ಮಾಡಲಾಗಿದೆ. ಒಟ್ಟಿನಲ್ಲಿ ಸಾಕಾರಪರಮಾತ್ಮ ಸ್ವರೂಪವಾದ ಇಷ್ಟಲಿಂಗವು (ಪ್ರಾಣಲಿಂಗದ ಸ್ವರೂಪದಲ್ಲಿ) (ಶ್ರೀಗುರುವಿನಿಂದ ಸಾಧಕನಿಗೆ ಲಿಂಗತತ್ತ್ವವಾಗಿ ಪೂಜೆಗೆ ದೊರಕಿ ಈ ಇಷ್ಟಲಿಂಗದ ಪೂಜೆಯಿಂದ ಸಾಧಕನು ನಿರಾಕಾರ ಲಿಂಗತತ್ತ್ವವನ್ನು ಅರಿಯಬಹುದೆಂಬ ವಿಚಾರ ಈ ವಚನ ಪ್ರತಿಪಾದಿಸುತ್ತದೆ.

9. ಅಂತರಂಗದಲ್ಲಿ ಅರಿವಾದಡೇನಯ್ಯಾ,
ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕರ!
ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೆ!
ಕನ್ನಡಿಯಿಲ್ಲದಿರ್ದಡೆ ತನ್ನ ಮುಖವ ಕಾಣಬಹುದೆ?
ಸಾಕಾರ ನಿರಾಕಾರ ಏಕೋದೇವಾ.
ಕೂಡಲಸಂಗಮದೇವಾ.

ಈ ವಚನದಲ್ಲಿ ಕನ್ನಡಿಯ ಉಪಮಾನ 'ಇಷ್ಟಲಿಂಗದ' ಆರಾಧನೆಯಾಗಿದೆ. ಈ ಇಷ್ಟಲಿಂಗತತ್ತ್ವದ ಮೂಲಕ ಸಾಕಾರ ನಿರಾಕಾರ ಎರಡನ್ನೂ ಸಾಧಿಸುವ ವಿಚಾರವಿದೆ. ಸಾಧಕನು ಸಾಕಾರ ಪರಮಾತ್ಮ ಸಾಧನೆಯನ್ನು (ಆಜ್ಞಾಚಕ್ರದ) ಮಾಡಿದ ತಕ್ಷಣವೇ ಸಾಧಕನಲ್ಲಿಯ ಏಳು ನಿವೃತ್ತಿ ಶಕ್ತಿಗಳು (ಆಜ್ಞಾ ಚಕ್ರಸ್ಥಾನದಿಂದ ಸಹಸ್ರಾರದವರೆಗೆ) ಕಾರ್ಯಕ್ಕೆ ಬಂದು ಸಾಧಕನ ಅನುಭವವನ್ನು ನಿರಾಕಾರಗೊಳಿಸುತ್ತವೆ. ಆ ಏಳು ನಿವೃತ್ತಿ ಶಕ್ತಿಗಳೇ (1) ಬಿಂದು (2) ಬೋಧಿನಿ (3) ನಾದ (4) ಮಹಾದಾನ (ನಾದಾಂಕ) (5) ವ್ಯಾಪಿಕಾ, (6) ಸಮನಿ (7) 'ಉನ್ಮನಿ' ಪರಶಿವತತ್ತ್ವ (ಪರಾಶಕ್ತಿ). ಲಿಂಗತತ್ತ್ವವಾಗಿದೆ. ಈ ಉನ್ಮನಿ ಶಕ್ತಿಯ ವಿಚಾರದಲ್ಲಿ ಅನೇಕ ಜನ ಶರಣರು ತಮ್ಮ ಅನುಭಾವಗಳನ್ನು ತಮ್ಮ ವಚನಗಳಲ್ಲಿ ಪ್ರತಿಪಾದಿಸಿದ್ದಾರೆ. ಇಂತಹ ಶರಣರಲಿಲ ಅಕ್ಕಮಹಾದೇವಿಯವರು ಬಹಳ ಪ್ರಮುಖರು. 'ಉನ್ಮನಿ'ಯ ವಿಚಾರದಲಿಲ ಅವರ ಒಂದು ವಚನ ಹೀಗಿದೆ (ಆದರೆ ಅಕ್ಕಮಹಾದೇವಿಯವರ 'ಯೋಗಾಂಗ ತ್ರಿವಿಧಿ' ಬಹಳ ಹೆಸರು ಮಾಡಿ ಪ್ರಸಿದ್ಧವಾಗಿದೆ.

10. ಆಧಾರ – ಸ್ವಾಧಿಷ್ಠಾನ – ಮಣಿಪೂರಕ –
ಅನಾಹತ – ವಿಶುದ್ಧಿ – ಆಜ್ಞೆಯವ ನುಡಿದರೇನು?
ಆದಿಯನಾದಿಯ (ಸುದ್ದಿಯ) ಕೇಳಿದಡೇನು, ಹೇಳಿದಡೇನು
ತನ್ನಲ್ಲಿದ್ದುದ ತಾನರಿಯದನ್ನಕ್ಕರ
'ಉನ್ಮತಿ'ರಭಾಸದ ಮನ ಪವನದ ಮೇಲೆ
ಚೆನ್ನಮಲ್ಲಿಕಾರ್ಜುನಯ್ಯನ ಭೇದಿಸ್ಥಲವರಿಯದವರು
– ಅಕ್ಕಮಹಾದೇವಿಯವರು.

ಆದಿ: ಆಜ್ಞೇಯ ಚಕ್ರ (6)
ಅನಾದಿ: ಸಹಸ್ರಾರದ ಅನುಭಾವ (7, 8, 9, 10)
ಚೆನ್ನಮಲ್ಲಿಕಾರ್ಜುನ: ಸಹಸ್ರಾರದ ಅನುಭಾವ (7, 8, 9, 10)
1.ಆಧಾರ, 2. ಸ್ವಾಧಿಷ್ಠ ಮತ್ತು 3. ಮಣಿಪೂರಕ 4. ಅನಾಹತ.
5. ವಿಶುದ್ಧಿ ಮತ್ತು ಆಜ್ಞೇಯ – ಬೆನ್ನುಹುರಿಯಲ್ಲಿನ 6 ಚಕ್ರಗಳು.

ವಚನ 'ತನ್ನಲ್ಲಿರುವ ವಿಚಾರವನ್ನು" ಅರಿಯಲು 'ಉನ್ಮನ ನಿವೃತ್ತಿ ಶಕ್ತಿಯ ಪ್ರಮಾಣವನ್ನು ಪ್ರತಿಪಾದಿಸುತ್ತದೆ.

ಹೀಗೆ ಮೇಲಿನ ಹತ್ತು ವಚನಗಳು "ಇಷ್ಟಲಿಂಗ ತತ್ತ್ವ"ವನ್ನು ಪ್ರತಿಪಾದಿಸಿ, ಇಷ್ಟಲಿಂಗದ ಪ್ರಯೋಜನವನ್ನು ದೃಷ್ಟಿಯೋಗದ ಹಿನ್ನೆಲೆಯ ಅಂತರ್ಮುಖಿ ಯೊಗಗಳ ಕ್ರಮಗಳನ್ನು ಪ್ರಯೋಜನಗಳನ್ನು ಅನುಭಾವದ ಹಿನ್ನೆಲೆಯಲ್ಲಿ ಪ್ರತಿಪಾದಿಸಿದೆ.

7. ಸಾರಾಂಶ: ಬಿ.ಹೆಚ್.ಇ.ಎಲ್. ಬಸವಕಲ್ಯಾಣ ಸಮಿತಿ (ರಿ.) ಇವರು ಕೊಟ್ಟಿರುವ "ಇಷ್ಟಲಿಂಗ ತತ್ತ್ವ" ವಿಷಯದ ಹಿನ್ನೆಲೆಯಲ್ಲಿ ಈ ಪ್ರಬಂಧ ರಚನೆಯನ್ನು ಮಾಡಲಾಗಿದೆ. ನಮ್ಮ ಇಂದಿನ ಕಾಲದ ವೀರಶೈವ ಸಮಾಜದಲ್ಲಿ ಧರ್ಮದ ಬಗೆಗೆ ಲಿಂಗತತ್ತ್ವದ ಅಭಿವ್ಯಕ್ತತೆ, ಲಿಂಗತತ್ತ್ವದ ಅರಿವು, ಲಿಂಗತತ್ತ್ವದ ಆಚಾರ, ಲಿಂಗತತ್ತ್ವದ ಅನುಭಾವ) ಆಸಕ್ತಿ, ಕ್ಷೀಣಿಸಿದ್ದು, ಆಸಕ್ತಿ ಇರುವ ಸ್ವಲ್ಪ ಜನರಲ್ಲಿ ದುರಭಿಮಾನಗಳಿದ್ದು, ವೀರಶೈವ ಸಮಾಜ 'ಸಂಘಟನೆ, ಇಲ್ಲದೆ ಸೊರಗಿದೆ. ಈ ವ್ಯತ್ಯಯ ನಿವಾರಣೆಗೆ ಮೂಲಭೂತ ಉಪಾಯ ವೀರಶೈವ ಧರ್ಮಿಯರು, ತಮ್ಮ ಧರ್ಮದ "ಶಾಸ್ತ್ರ" ಹಾಗೂ "ಅನುಭಾವ" ಎರಡನ್ನೂ ಬೇರೆ ಮಾಡದೆ ಪರಸ್ಪರ ಪೂರಕವಾಗಿ ಅಧ್ಯಯನ ಮಾಡಲೇ ಬೇಕಾದ ಅನಿವಾರ್ಯತೆಯ ಗಮನ, ಕಾರಣ. ಅನುಭಾವದ ಹಿನ್ನೆಲೆಯಿಲ್ಲದೆ ಶಾಸ್ತ್ರದ ತಿಳುವಳಿಕೆ ಆಗುವುದಿಲ್ಲ; ಹಾಗೂ ಶಾಸ್ತ್ರದ ತಿಳುವಳಿಕೆ ಇಲ್ಲದೆ ಅನುಭಾವ ತಿಳಿಯುವುದಿಲ್ಲ. ಇವು ಒಬ್ಬ ಮನುಷ್ಯನಲ್ಲಿ ಹುಟ್ಟಿ ಬೆನ್ನಿನ ಸಮಾಚಾರವಾಗಿದೆ. ಸರಿಯಾದ ಧರ್ಮದ ಜ್ಞಾನಕ್ಕೆ ಶಾಸ್ತ್ರ, ಅನುಭಾವ ಎರಡೂ ಬೇಕಾಗಿದೆ. ಸರಿಯಾದ ಜ್ಞಾನವಿಲ್ಲದೆ, ಅಜ್ಞಾನ ನಿವಾರಣೆಯಾಗದು, ಹಾಗೂ ಶಾಂತಿ, ಸಮಾಧಾನ ದೊರಕುವುದಿಲ್ಲ. ಹೀಗಾಗಿ ಈ 'ಇಷ್ಟಲಿಂಗತತ್ತ್ವ'ದ ಪ್ರತಿಪಾದನೆಯನ್ನು ಶಾಸ್ತ್ರ ಹಾಗೂ ಅನುಭಾವಗಳ ಹಿನ್ನೆಲೆಯಲ್ಲೇ ಮಾಡಲಾಗಿದೆ. ಈ ಇಷ್ಟಲಿಮಗತತ್ತ್ವದ ವಿಚಾರ ತಿಳಿದ ಮೇಲೆ ಇಷ್ಟಲಿಂಗಧಾರಣೆ, ಆಚಾರ, ಅನುಭಾವಗಳ ಅವಶ್ಯಕತೆ ಧರ್ಮದ ಆಚಾರಣೆಗೆ ಇಷ್ಟೆ ಇದೆ.

ಆಧಾರಗಳು


1. 'ಪಾರಮೇಶ್ವರಾಮ' ಡಾ. ಎಮ್. ಶಿವಕುಮಾರಸ್ವಾಮಿ, ವೀರಶೈವ ಅನುಸಂಧಾನ ಸಂಸ್ಥೆ, ಬೆಂಗಳೂರು.
2. "'ಶ್ರೀ ಸಿದ್ಧಾಂತ ಶಿಖಾಮಣಿ' ಪಾರಾಯಣ ಗ್ರಂಥ" ಡಾ. ಎಸ್.ಆರ್. ಸಿದ್ಧಲಿಂಗಪ್ಪ.

**Institute of Veerashaiva and Contempovency Studies, 2003.**

3. ಸಮಗ್ರವಚನ ಸಂಪುಟ "ಕರ್ನಾಟಕ ಸರ್ಕಾರ– 1993, 2000.'
4. "36 ತತ್ತ್ವಗಳು ಹಾಗೂ ಸಪ್ತಪ್ರಮಾತೃವರ್ಗ" ಡಾ. ಎನ್.ಆರ್. ಸಿದ್ದಲಿಂಗಪ್ಪ.

**Institute of Veerashaiva and Contempovency Studies, Bangalore, 2005**

*************************************************************************

ಈ ಲೇಖನದ ಬಗೆಗೆ

ಈ "ವಚನಕಾರರ ಮನಮಗ್ನಯೋಗ ಹಾಗೂ ಶಿವಸಾಕ್ಷಾತ್ಕಾರ"ವೆಂಬ ಸಂಶೋಧನಾತ್ಮಕ ಲೇಖನವು ಒಂದು ಆಗಿದೆ. ಇಲ್ಲಿ ಪ್ರತಿಪಾದಿತವಾಗಿರುವ ವಿಚಾರಗಳು ನಾಲ್ಕು ಸಂಶೋಧನಾತ್ಮಕ ಪುಟ್ಟ ಗ್ರಂಥಗಳಲ್ಲಿನು ವಿಚಾರಗಳ ಸಮೀಕ್ಷೆಯಾಗಿದೆ. ಈ ಲೇಖನದಲ್ಲಿ ಪ್ರತಿಪಾದಿತ ವಿಚಾರಗಳ ಹಿನ್ನೆಲೆಯಲ್ಲಿನ ಸಾಧನ ಮಾರ್ಗದಲ್ಲಿ ಒಬ್ಬ ಸಾಧಕನು ಜೀವಾತ್ಮ ಸ್ಥಿತಿಯಿಂದ, ಪರಮಾತ್ಮವಾಗಿ ಶಿವಾತ್ಮಕನಾಗುವ ಸ್ಥಿತಿಯನ್ನು ಪ್ರತಿಪಾದಿಸಲಾಗಿದೆ.

ಪ್ರಮುಖವಾಗಿ ಈ 'ಮನಮಗ್ನಯೋಗದ' ದಾರಿ ಮನವೇ ಲಿಂಗವಾಗುವ ಕ್ರಮಗಳನ್ನು 'ಚಿತ್ತ, ಸ್ವರೂಪ ಚಿತ್, ಸ್ವರೂಪವಾಗುವ ಕ್ರಮ, ಮತ್ತು ಜಂಗಮವು ಲಿಂಗರಾಗುವ ಕ್ರಮಗಳನ್ನು ಪ್ರಮಾತೃ ವರ್ಗಗಳ ಮೂಲಕ ಮುವ್ವತ್ತಾರು ತತ್ತ್ವ ಗಳ ಹಿನ್ನೆಲೆಯಲ್ಲಿ, ಶಕ್ತಿಗಳ, ಪ್ರಜ್ಞೆಗಳ ಮೂಲಕ ಸಾದಾಖ್ಯ, ಕಳೆಗಳನ್ನು ಗುರುತಿಸಿ ಅವುಗಳ ಹಿಂದಿನ 'ಚೈತನ್ಯ'ವನ್ನು ಗುರುತಿಸುವ ಕ್ರಮಗಳನ್ನೂ ಪ್ರತಿಪಾದಿಸಲಾಗಿದೆ.

ಈ ಮನಮಗ್ನ ಯೋಗದ ಕ್ರಮವು ಇಷ್ಟಲಿಂಗೋಪಾಸನೆಯ ಮೂಲಕ ಲಿಂಗತತ್ತ್ವನುಸಂಧಾನವನ್ನೂ ಮಾಡುವ ಸಾಧನ ಕ್ರಮದಲ್ಲಿ

1. 'ಪ್ರಮಾತೃ ವರ್ಗ'ದ ಹಿನ್ನೆಲೆಯಲ್ಲಿ (ಕಾಶ್ಮೀರಶೈವ ಸಿದ್ಧಾಂತ)
2. ವಚನಕಾರರ ವಚನಗಳ ಹಿನ್ನೆಲೆಯಲ್ಲಿ (ವೀರಶೈವ ಲಿಂಗಾಯುತ ಬಸವಧರ್ಮ, ಬಸವಾಯುತ)
3. 89 'ಪ್ರಜ್ಞಾ' ವಿಶೇಷಗಳ ಹಿನ್ನೆಲೆಯಲಿಲ (ಬುದ್ಧನ ಪ್ರತಿಪಾದನೆಗಳು)
4. 'ಶಕ್ತಿ'ಗಳ ಹಿನ್ನೆಲೆಯಲಿಲ (ವೀರಶೈವದ, ಆಗಮೊಹ, ಹಿನ್ನೆಲೆಗಳು)
5. 'ಶಾಸ್ತ್ರ'ಕಾರರ ಹಿನ್ನೆಲೆಗಳಲ್ಲಿ (ಶ್ರೀ ಸಿದ್ಧಾಂತ ಶಿಖಾಮಣಿ ಶಾಸ್ತ್ರ ಸಿದ್ಧಾಂತ ಗ್ರಂಥ, 28 ಆಗಮಗಳನುಸಾರ ಹಾಗೂ ವೇದಾಂತ ಶಾಸ್ತ್ರದ ಹಿನ್ನೆಲೆಗಳಲ್ಲಿ)

ಪ್ರತಿಪಾದನೆಯಾಗಿದೆ 'ಈ ಮನಮಗ್ನ ಯೋಗ' ಪ್ರಮುಖವಾಗಿ ಪ್ರಮಾತೃವರ್ಗಗಳ ಮೂಲಕ ನಡೆಯುತ್ತದೆ. ಈ ಲೇಖನದಲ್ಲ ಪ್ರತಿಪಾದಿತವಾಗಿರುವ 'ಮನಮಗ್ನ ಯೋಗದ' ಕ್ರಮವನ್ನು ಬಸವಣ್ಣನವರು ಮತ್ತು ಚೆನ್ನಬಸವಣ್ಣನ ನಿರಂತರ ಶರಣರು ಅನುಸರಿಸಿದ ಮಾರ್ಗವಾಗಿದೆ. ಈ ಲೇಖನದಲ್ಲಿನ ಸಾಧಕನ ಕ್ರಮಗಳಿಗೆ ಅಪಾರವಾದ ವಿಘುಲವಾದ 'ಶಾಸ್ತ್ರ' – ಅನುಭವ' ಸಾಹಿತ್ಯದ ಹಿನ್ನೆಲೆಗಳಿಗೆ ಮಾರ್ಗವಾಗಿದೆ. (ಸಾಧನೆ) ಎಂಬುದು ಸಂತೋಷವಾದ ಕವಿ ವಿಚಾರವಾಗಿದೆ.

**Institute of Veerashaiva and Contemporary Studies**

**Dr. S.R. Siddaligappa**

**30.10.2005**

ಭಾನುವಾರ

ಮನಮಗ್ನಯೋಗ

ಡಾ. ಎಸ್.ಆರ್. ಸಿದ್ಧಲಿಂಗಪ್ಪ
ಪ್ರಧಾನ ಕಾರ್ಯದರ್ಶಿ IDV&CS.,
ಬೆಂಗಳೂರು.

1. ಹಿನ್ನಲೆಗಳು:
'ಯೋಗ'ವೆಂದರೆ ಎರಡು ವಿಚಾರಗಳ ಕೊಡುವಿಕೆ. ಇಲ್ಲಿ ಯೋಗವೆಂದರೆ ಜೀವಾತ್ಮನಲ್ಲಿರುವ ಪರಮಾತ್ಮನ ಗುರುತಿಸುವಿಕೆ, ಅಥವಾ ಹಿನ್ನೆಲೆಯಲ್ಲಿ 'ಆತ್ಮ' ಸ್ವರೂಪ ತಿಳಿಯುವುದು ಅತ್ಯಂತ ಅವಶ್ಯವಾದ ವಿಚಾರವಾಗಿದೆ. 'ಆತ್ಮ' ಸ್ವರೂಪವನ್ನು ನಿರಾಕಾರ ಸ್ವರೂಪ ಮತ್ತು ಸಾಕಾರ ಸ್ವರೂಪವೆಂದು ಎರಡು ಬಗೆಯಲ್ಲಿ ತಿಳಿಯಬಹುದು.

'ಆತ್ಮ' ಸ್ವರೂಪ
ನಿರಾಕಾರ ಸ್ವರೂಪ ಪರಮಾತ್ಮ
ಗುರು
ಸೃಷ್ಟಿ ಸೃಷ್ಟಿ
1) ನಿಷ್ಕಲ
2) ಶೂನ್ಯ
3) ನಿಃಶೂನ್ಯ
4) ಸಹಜ

1. ನಿರಾಕಾರ ಸ್ವರೂಪ ಪರಮಾತ್ಮ
2. ಸಾಕಾರ ಸ್ವರೂಪ ಪರಮಾತ್ಮ 'ಶಿವ' ಜಂಗಮ
3. ಸಾಕಾರ ಸ್ವರೂಪ ಜೀವಾತ್ಮ

ಚಿತ್ರ–1. ಆತ್ಮ ಸ್ವರೂಪ

ಈ ನಿರಾಕಾರ ಸ್ವರೂಪ ಪರಮಾತ್ಮವನ್ನು 'ಪರಶಿವ'ನೆಂದು ಕರೆಯಲಾಗಿದೆ. ಮತ್ತು ಸಾಕಾರ ಸ್ವರೂಪ ಪರಮಾತ್ಮನನ್ನು 'ಶಿವ'ನೆಂದು ಕರೆಯಲಾಗಿದೆ. ಆದರೆ, ಸಾಕರ ಸ್ವರೂಪ 'ಜೀವಾತ್ಮ'ವಾಗಿಯೂ ಸಹ ಇದೆ. ಸೃಷ್ಠಿ ಕ್ರಮದಲ್ಲಿ ನಿರಾಕಾರ ಪರಮಾತ್ಮ ಸ್ವರೂಪವು ಸಾಕಾರ ಪರಮಾತ್ಮವಾಗಿ, ಮತ್ತು ಅದೇ 'ಜೀವಾತ್ಮ' ಸ್ವರೂಪವಾಗಿದೆ. ಆದರೆ ನಿರಾಕಾರ ಸ್ವರೂಪ ಪರಮಾತ್ಮವಾದ ಪರಶಿವ ತತ್ತ್ವವು ತನ್ನ ನಿಷ್ಕಲ ಸ್ವರೂಪಕ್ಕೆ ಸಹಜ, ನಿಃಶೂನ್ಯ ಹಾಗೂ ಶೂನ್ಯ ಸ್ಥಿತಿಗಳಿಂದ ಉಂಟಾಗಿರುತ್ತದೆ. ಅಂದರೆ ಸೃಷ್ಠಿ ಕ್ರಮದಲ್ಲಿ ಮೊದಲನೆಯ ನಿರಾಕಾರ ಪರಮಾತ್ಮ ಸ್ಥಿತಿಯು 'ಸಹಜ' ಸ್ಥಿತಿಯಾಗಿದೆ. ಇದನ್ನು ಎಂದು **Professional State of Consciousness'** ಎಂದು ಕರೆಯಬಹುದು. ಈ 'ಸಹಜ' ಸ್ಥಿತಿಯನ್ನು, ನಿಜಸ್ಥಿತಿ, ಶರಣಸ್ಥಿತಿ, ಅನಾದಿ

ಜಂಗಮಸ್ಥಿತಿ ಮತ್ತು ಶಿವಯೋಗಿಯ ಸ್ಥಿತಿ ಎಂತಲೂ ಶಾಸ್ತ್ರ ಹಾಗೂ ಅನುಭಾವ ತತ್ತ್ವಗಳಲ್ಲಿ ಕರೆಯಲಾಗಿದೆ. ಈ ಎಲ್ಲಾ ನಿರಾಕಾರ ಸ್ವರೂಪ ಪರಮಾತ್ಮ ಸ್ಥಿತಿಗಳಲ್ಲಿ 'ಗುರು'ವೆಂದು ಕರೆಯಲಾಗಿದೆ. ಈ ನಿರಾಕಾರ ಸ್ವರೂಪ ಪರಮಾತ್ಮ ಸ್ಥಿತಿಯಿಂದ ಅಥವಾ 'ನಿಷ್ಕಲ'ದಿಂದ, ಸಾಕಾರ ಸ್ವರೂಪ ಪರಮಾತ್ಮ ಸ್ಥಿತಿಯಾದ 'ಶಿವ' ಸ್ವರೂಪ ಉಂಟಾಗಿದೆ. ಈ 'ಶಿವ' ಸ್ಥಿತಿಯನ್ನು 'ಸಕಲ–ನಿಷ್ಕಲ'ವೆಂತಲೂ ತಿಳಿಯಲಾಗಿದೆ. ಈ 'ಶಿವ' ಸ್ವರೂಪವನ್ನೇ 'ಲಿಂಗ'ವೆಂದು ಕರೆಯಲಾಗಿದೆ.

ಈ ಸಾಕಾರ ಪರಮಾತ್ಮ ಸ್ವರೂಪವು ಸಾಕಾರ ಸ್ವರೂಪದ 'ಜೀವಾತ್ಮ'ನಿಗೆ ಕಾರಣವಾಗಿದೆ. ಈ 'ಜೀವಾತ್ಮ' ಸ್ಥಿತಿಯನ್ನು 'ಜಂಗಮ'ವೆಂದು ತಿಳಿಯಲಾಗಿದೆ. ಈ ಜೀವಾತ್ಮ ಸ್ಥಿತಿಯನ್ನು 'ಸಕಲ'ವೆಂದು ತಿಳಿಯಲಾಗಿದೆ.

ಹೀಗಾಗಿ ನಿರಾಕಾರ ಪರಮಾತ್ಮ ಸ್ವರೂಪವು ಸಾಕಾರ ಸ್ವರೂಪಗಳಾದ ಪರಮಾತ್ಮ ಹಾಗೂ ಜೀವಾತ್ಮ ಸ್ವರೂಪಗಳಿಗೆ ಕಾರಣವಾಗಿದೆ. ಇವನ್ನೇ 'ತ್ರಿವಿಧ'ಗಳಿಂದ ಗುರು, ಲಿಂಗ, ಜಂಗಮಗಳೆಂದು ತಿಳಿಯಲಾಗಿದೆ. ಈ ತ್ರಿವಿಧಗಳು ಸಾಧಕನ ದೇಹದಲ್ಲಿ 'ತತ್ತ್ವ'ಗಳಾಗಿ ಇದ್ದು; ಈ ತತ್ತ್ವಗಳಲ್ಲಿನ ಅನುಭವ ಜ್ಞಾನದಿಮದ, ಸಾಧಕನು ತನ್ನ ಆಧ್ಯಾತ್ಮ ಸಾಧನೆಗಯನ್ನು ಮಾಡುತ್ತಾನೆ. ಇಲ್ಲಿ ಆಧ್ಯಾತ್ಮ ಸಾಧನೆ 'ಮನಮಗ್ನ ಯೋಗ'ವಾಗಿದೆ. ಈ ಸಾಧಕನ ದೇಹದಲ್ಲಿರುವ ತತ್ತ್ವಗಳನ್ನು ಪಿಂಡಾಂಡ ತತ್ತ್ವ'ವಾಗಿದೆ. 'ಶಿವ ತತ್ತ್ವ'ದಿಂದ ಪೃಥ್ವಿ ತತ್ತ್ವದವರೆವಿಗೆ 36 ತತ್ತ್ವಗಳೆಂದು ತಿಳಿಯಲಾಗಿದೆ. ಇಡೀ ಬ್ರಹ್ಮಾಂಡ ಸ್ವರೂಪವೇ ಪಿಂಡಾಂಡ ಸ್ವರೂಪವಾಗಿ ಸಾಧಕನ ದೇಹದಲ್ಲಿ ಅಡಕವಾಗಿರುವುದರಿಂದ, ಈ ಪಿಂಡಾಂಡದ ತತ್ತ್ವಗಳ ಜ್ಞಾನವೇ ಇಡೀ ಬ್ರಹ್ಮಾಂಡವನ್ನೂ ಸಹ ತಿಳಿದುಕೊಳ್ಳಲು ಸಹಾಯ ಮಾಡುತ್ತದೆ. ಈ 36 ತತ್ತ್ವಗಳನ್ನು ಮೂರು ಭಾಗಗಳಲ್ಲಿ ತಿಳಿಯಲಾಗಿದೆ. ಈ 36 ತತ್ತ್ವಗಳನ್ನು ಮೂರು ಭಾಗಗಳಲ್ಲಿ ತಿಳಿಯಲಾಗಿದೆ. ಸಕಲತತ್ತ್ವ 25 ತತ್ತ್ವಗಳು ಸಕಲ–ನಿಷ್ಕಲ ತತ್ತ್ವಗಳು 10 ಮತ್ತು ನಿಷ್ಕಲ ತತ್ತ್ವ 1 ತತ್ತ್ವ. ಇವೆಲ್ಲಾ ಸೇರಿ 36 ತತ್ತ್ವಗಳಾಗುತ್ತದೆ. ಈ ಎಲ್ಲಾ ವಿಚಾರಗಳನ್ನು ಸಾಧಕನ ದೇಹದಲ್ಲಿ ಸ್ಥಾನೀಕವಾಗಿ **(positional description),** ತಿಳಿದುಕೊಳ್ಳುವ ಒಂದು ಕ್ರಮವಿದೆ. ಅದು ಈ ಕೆಳಗಿನಂತೆ ಇದೆ.

ಚಿತ್ರ–2 ಸಾಧಕನ ಆಧ್ಯಾತ್ಮಿಕ ವ್ಯಕ್ತಿತ್ವ

ಈ ಸಕಲತತ್ತ್ವಗಳಾದ ಇಪ್ಪತ್ತೈದು ತತ್ತ್ವಗಳನ್ನು ಸಾಧಕನ ಪ್ರಾಪಂಚಿಕ ಸಂಬಂಧಿತ ತತ್ತ್ವಗಳೆಂದು ತಿಳಿಯಲಾಗಿದೆ. (ಚಕ್ರ ಒಂದರಿಂದ; ನಾಲ್ಕನೆಯದರವರೆಗೆ) ಈ ಇಪ್ಪತ್ತೈದು ತತ್ತ್ವಗಳನ್ನು ಕ್ರಮವಾಗಿ "ಕೆಳಗಿನಿಂದ ಮೇಲ್ಮುಖವಾಗಿ" ಪಂಚಕರ್ಮೇಂದ್ರಿಯ, ಪಂಚ ವಿಷಯ, ಪಂಚ ಜ್ಞಾನೇಂದ್ರಿಯ, ಪಂಚವಾಯು, ಹಾಗೂ ಜ್ಞಾತೃಪ–ಚಕಗಳೆಂದು ತಿಳಿಯಲಾಗಿದೆ. ಈ ಐದು ಗುಂಪುಗಳು ಪಂಚಮಾಹಾಭೂತಗಳ ಸಂಬಂಧಿತ ತತ್ತ್ವಗಳಾಗಿವೆ. ಪಂಚ ಮಹಾಭೂತ ತತ್ತ್ವಗಳು ಕ್ರಮವಾಗಿ, ಪೃಥ್ವಿ;

ಅಪ್ಪು, ತೇಜ, ವಾಯು ಮತ್ತು ಆಕಾಶಗಳಾಗಿವೆ. ಈ ಪಂಚ ಮಹಾಭೂತಗಳಲ್ಲಿನ ಪರಸ್ಪರ ಸಂಬಂಧಗಳಿಂದ, ಈ ಮೇಲಿನ ಪಂಚಕಗಳಾದ ತತ್ತ್ವಗಳು ಉಂಟಾಗಿದೆ.

ಚಿತ್ರ–3: 25 ಸಕಲ ತತ್ತ್ವಗಳು : ಜೀವಾತ್ಮಸ್ವರೂಪದವು
(ಭೌತದ್ರವ್ಯಗಳ ಜೊತೆ ಇರುವ ತತ್ತ್ವಗಳು) ಜಂಗಮ (ಪ್ರಾಪಂಚಿಕ ತತ್ತ್ವಗಳು)

| ಪಂಚಕಗಳು | 'ಪಂಚ ಭೂತಗಳು' | ಪೃಥ್ವಿ | ಅಪ್ಪು | ತೇಜ | ವಾಯು | ಆಕಾಶ | ಪಂಚಬ್ರಹ್ಮರು |
|---|---|---|---|---|---|---|---|
| ಕರ್ಮೇಂದ್ರಿಯ | ಪೃಥ್ವಿ | ವಾಯು | ಉಪಸ್ಥ | ಪಾದ | ಪಾಣಿ | ವಾಕ್ | ಸದ್ಯೋತ |
| ವಿಷಯ | ಅಪ್ಪು | ಗಂಧ | ರಸ | ರೂಪ | ಸ್ವರ್ಶ | ಶಬ್ಧ | ರಾಮದೇವ |
| ಜ್ಞಾನೇಂದ್ರಿಯ | ತೇಜ | ಪ್ರಾಣ | ರಸನ | ನೇತ್ರ | ತ್ವಥ | ಶ್ರೋತ್ರ | ಅಘೋರ |
| ವಾಯು | ವಾಯು | ಅಸಾನ | ಸಮಾನ | ವ್ಯಾನ | ಪ್ರಾಣ | ಉದಾನಂ | ತತ್ಪುರುಷ |
| ಜ್ಞಾತೃ | ಆಕಾಶ | ಚಿತ್ತ | ಬುದ್ಧಿ | ಅಹಂಕಾರ | ಶುನ | ಜ್ಞಾತೃ | ಈಶಾನ |

ಈ ಪಂಚೀಕರಣ ಕ್ರಮದಲ್ಲಿ ಪಂಚಮಹಾಭೂತ ತತ್ತ್ವಗಳು ಇಪ್ಪತ್ತೈದು ತತ್ತ್ವಗಳಾಗಿ, ಉಂಟಾಗಿದೆ. ಉದಾಹರಣೆಗೆ ಆಕಾಶದಿಂದ ಆಕಾಶ, ಜ್ಞಾತೃ ತತ್ತ್ವವಾಗಿದೆ. ಆಕಾಶದಿಂದ ಉಂಟಾದ ಕಾಯತತ್ತ್ವ ಮನತತ್ತ್ವವಾಗಿ, ಆಕಾಶದಿಂದಾದ ತೇಜತತ್ತ್ವ ಅಹಂಕಾರ ತತ್ತ್ವವಾಗಿದೆ. ಆಕಾಶದಿಂದ ಅಪಪು ತತ್ತ್ವವು ಬುದ್ಧಿ ತತ್ತ್ವವಾಗಿದೆ. ಆಕಾಶದಿಂದಾದ ಪೃಥ್ವಿ ತತ್ತ್ವವು ಚಿತ್ತ ತತ್ತ್ವವಾಗಿದೆ. ಹೀಗಾಗಿ ಪಂಚಮಹಾಭೂತ ತತ್ತ್ವಗಳು ಪಂಚೀಕರಣ ಕ್ರಮದಲ್ಲಿ; ಕ್ರಮವಾಗಿ ಜ್ಞಾತೃ, ರುನ, ಅಹಂಕಾರ, ಬುದ್ಧಿ, ಮತ್ತು ಚಿತ್ತತತ್ತ್ವಗಳಾಗಿ ಜ್ಞಾತೃಪಂಚಕಗಳೆನಿಸಿವೆ. ಈ ಜ್ಞಾತೃ ಪಂಚಕಗಳಲ್ಲಿ ಜ್ಞಾತೃ, ಮನ, ಚಿತ್ತ ತತ್ತ್ವಗಳು ಪ್ರಮುಖವಾದ ತತ್ತ್ವಗಳಾಗಿವೆ. ಇವುಗಳಲ್ಲಿ 'ಜ್ಞಾತೃ' ತತ್ತ್ವವು ಜೀವಾತ್ಮ ಸ್ವರೂಪದಲ್ಲಿದೆ. ಅಂದರೆ, ಈ 'ಜ್ಞಾತೃ' ತತ್ತ್ವದ್ಲಲಿ ಸಕಲ ತತ್ತ್ವಗಳಾದ ಬೇರೆ ಇನ್ನು 24 ತತ್ತ್ವಗಳು ಸೇರಿವೆ. ಈ ಜ್ಞಾತೃ ತತ್ತ್ವವನ್ನು **Self;** ಅಥವಾ **Soul;** ಅಥವಾ ಜೀವಾತ್ಮ ಅಥವಾ ಜಂಗಮವೆಂದು ತಿಳಿಯಬಹುದು. ಈ ಮನತತ್ತ್ವವನ್ನು **Mind** ಎಂದು ತಿಳಿಯಬಹುದು. ಚಿತ್ತ ತತ್ತ್ವವನ್ನು ಜೀವಾತ್ಮ ಸ್ವರೂಪದಲ್ಲಿನ ಖಚಿತ ಮನಸ್ಸು ಅಥವಾ **confirmed mind** ಎಂದು ತಿಳಿಯಬಹುದು. ಬುದ್ಧಿ ತತ್ತ್ವವು **Intellect** ಆಗಿ; ಅಹಂಕಾರ ತತ್ತ್ವವು **ego factor** ಎಂದು ತಿಳಿಯಬಹುದು. ಸಾಧಕನಿಗೆ ಪಂಚವಿಷಯಗಳಾದ ಶಬ್ಧ, ಸ್ವರ್ಶ, ವನನ ಗ್ರಂಥಗಳು, ಪ್ರಾಪಂಚಿಕ ತತ್ತ್ವಗಳಾಗಿವೆ ಅವವನ್ನು ಭಾದಿಸುತ್ತವೆ. ಈ ಪ್ರಾಪಂಚಿಕ ತತ್ತ್ವಗಳ ಅನುಸಂಧಾನದಲ್ಲಿ ಸಾಧಕನು ತನ್ನ 'ಮನ'ವನ್ನು ತೊಡಗಿಸಿಕೊಂಡು ತನ್ನ ಕರ್ಮೇಂದ್ರಿಯಗಳನ್ನು ಜ್ಞಾನೇಂದ್ರಿಯಗಳನ್ನು ಪಂಚ ವಿಷಯಗಳ ಅನುಸಂಧಾನದಲ್ಲಿ ತೊಡಗಿಸಿಕೊಳ್ಳುತ್ತಾನೆ. ಈ ಪಂಚ ವಿಷಯಗಳ ಅನುಸಂಧಾನದಲ್ಲಿ ತೊಡಗಿಸಿದ 'ಸಾಧಕನ ಮನಸ್ಸು' ಕ್ಲೇಶಗಳಿಗೆ, ದುಃಖಕ್ಕೆ ಒಳಗಾಗಿ, ಅರಿಷಡ್ವರ್ಗಗಳಾದ, ಕಾರು, ಕ್ರೋಧ, ಮೋಹ, ಲೋಭ, ಮದ, ಮಾತ್ಸರ್ಯಗಳಿಗೆ ಒಳಗಾಗಿ ಪ್ರಾಪಂಚಿಕ ವ್ಯವಹಾರಗಳಾದ, ಮಣ್ಣು, ಹೆಣ್ಣು, ಹೊನ್ನುಗಳ ಹಿಂದೆ ಬಿದ್ದು, ಕಷ್ಟ, ನಷ್ಟಗಳನ್ನು ಅನುಭವಿಸುತ್ತದೆ. ಈ ಪ್ರಾಪಂಚಿಕ ವ್ಯವಹಾರಗಳಲ್ಲಿ 'ಮನಮಗ್ನ'ವಾಗುವಂತೆ ನೋಡಿಕೊಳ್ಳುತ್ತದೆ. ಜೀವಾತ್ಮನಾದ ಜ್ಞಾತೃವು. ತನ್ನ ಸಂಬಂಧಿತ 24 ತತ್ತ್ವಗಳಲ್ಲೇ ಮುಳುಗಿ ಏಳುತ್ತಾ; ತನ್ನ ಮನವನ್ನು ವಿಷಯ ಪಂಚಕಗಳ ಹಿಂದೆಯೇ ತೊಡಗಿಸಿಕೊಳ್ಳುತ್ತಾನೆ. ಆದರೆ, ಈ ಪಂಚೇಂದ್ರಿಯಗಳ ಸಂಬಂಧಿತ ವ್ಯವಹಾರಗಳಲ್ಲೇ ಮುಳುಗಿದ ಸಾಧನ 'ಮನಸ್ಸು' ಪಂಚಭೂತ ಸಂಬಂಧಿತ ಭೌತದ್ರವ್ಯಗಳ ಜೊತೆಯಲ್ಲಿನ ಪ್ರಜ್ಞಾವಿಶೇಷಗಳಲ್ಲಿ ವಿಶೇಷವಾಗಿ ತೊಡಗಿಸಿಕೊಂಡು ಇರುತ್ತದೆ. ಈ ಮನವನ್ನು ಸಾಧಕನು ಭೌತದ್ರವ್ಯಾತೀತ ಪ್ರಜ್ಞಾ ವಿಶೇಷಗಳಾದ ಪ್ರಜ್ಞಾ ವಿಶೇಷಗಳಾದ ಪ್ರಪಂಚಾತೀತ ತತ್ತ್ವಗಳಾದ ಸಕಲ–ನಿಷ್ಕಲ ತತ್ತ್ವಗಳಲ್ಲಿ ತನ್ನ ಮನವನ್ನು ತೊಡಗಿಸಿಕೊಂಡರೆ, ಅವನಿಗೆ ಪ್ರಾಪಂಚಿಕ ಸಂಬಂಧಿತ ಕ್ಲೇಶಗಳ ಸಂಬಂಧಗಳು ಇರುವುದಿಲ್ಲ. ಈ ಪ್ರಪಂಚ

ಸಂಬಂಧಿತ ತತ್ತ್ವಗಳಿಂದ ಸಾಧಕನು ತನ್ನ ಮನಸ್ಸನ್ನು ಪ್ರಪಂಚಾತೀತ ಸಂಬಂಧಿತ ತತ್ತ್ವಗಳಲ್ಲಿ ತೊಡಗಿಸಿಕೊಳ್ಳುವುದೇ ಸಾಧಕನಗೆ ಮೋಕ್ಷಮಾರ್ಗವಾಗಿದೆ. ಈ ರೀತಿ ಸಾಧಕನು ಪ್ರಪಂಚಾತೀತ ತತ್ತ್ವಗಳಲ್ಲಿ ತನ್ನ ಮನವನ್ನು ತೊಡಗಿಸಿಕೊಳ್ಳುವುದೇ ಇಲ್ಲ. 'ಸಾಧಕನಿಗೆ ಮನಮಗ್ನ ಯೋಗ'ವಾಗಿದೆ. ಮೋಕ್ಷ ಮಾರ್ಗದಲ್ಲಿ ಕಡೆಯಲ್ಲಿ ಸಾಧಕನು ಸಕಲ-ನಿಷ್ಕಲ ತತ್ತ್ವಗಳ ಮೂಲಕ. ನಿಷ್ಕಲ ತತ್ತ್ವವಾಗಿ, ಕಡೆಯಲ್ಲಿ ಸಹಜಸ್ಥಿತಿಯ, ಶರಣಸ್ಥಿತಿಯನ್ನು ತಲುಪಿ ಅದೇ ಆಗುವುದೇ ಸಾಧಕನಿಗೆ 'ಮನಮಗ್ನಯೋಗ'ವಾಗಿದೆ.

ಈ ಸಕಲತತ್ತ್ವಗಳನ್ನು 'ಜಡ' ತತ್ತ್ವಗಳನ್ನಾಗಿ ತಿಳಿಯಲಾಗಿದೆ. ಇವುಗಳ ಮೇಲಿನ ಸಕಲ-ನಿಷ್ಕಲ ತತ್ತ್ವಗಳಲ್ಲಿ ಐದು ಮಿಶ್ರ ಸೃಷ್ಟಿ ತತ್ತ್ವಗಳೂ, ಮತ್ತು ಐದು ದೈವಿ ಸೃಷ್ಟಿ ತತ್ತ್ವಗಳಿವೆ. ಕ್ರಮವಾಗಿ ಕೆಳಗಿನಿಂದ ಮೇಲ್ಮುಖವಾಗಿ ಸಕಲ-ನಿಷ್ಕಲ ತತ್ತ್ವಗಳು ಈ ಕೆಳಗಿನಂತೆ ಇವೆ.

ಜೀವಾತ್ಮ
ಅನಾಹತ ಚಕ್ರ ಸ್ಥಾನ
ಅಷ್ಟದಳಕಮಲ
ಪರಮಾತ್ಮ

**26** ನಿಯತಿ
**27** ಕಾಲ
**28** ರಾಗ
**29** ಅವಿದ್ಯಾ
**30** ಕಲಾ
**31** ಮಾಯೆ
**32** ಶುದ್ಧ ವಿದ್ಯಾ
**33** ಈಶ್ವರ
**34** ಸದಾಶಿವ
**35** ಶಕ್ತಿ
**36** ಶಿವ

ಅಶುದ್ಧ ತತ್ತ್ವಗಳು ಮಿಶ್ರ ಸೃಷ್ಟಿ ತತ್ತ್ವಗಳು
ಅಘೋರಮಾಯೆ

ಊರ್ಧ್ವಮಾಯೆ

ಶುದ್ಧ ತತ್ತ್ವಗಳು
ದೈವೀ ಸೃಷ್ಟಿ ತತ್ತ್ವಗಳು

ಚಿತ್ರ–4 ಸಕಲ–ನಿಷ್ಕಲ ತತ್ತ್ವಗಳು (ಪುಟ ನೋಡಿ)

2. ಮನಮಗ್ನಯೋಗ:–

ಸಾಧಕನ 'ಮನವು' 'ಶಿವ' ತತ್ತ್ವದಲಿಲ ಮಗ್ನವಾಗುವುದೇ "ಮನಮಗ್ನ ಯೋಗ"ವಾಗಿದೆ. ಆದರೆ, ಇದು ಅಷ್ಟು ಸುಲಭದ ವಿಚಾರವಲ್ಲ. ಈ ಮನಮಗ್ನ ಯೋಗದ ವಿಚಾರದಲ್ಲಿ ಚೆನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ ಪ್ರಸ್ತಾಪ ಮಾಡುತ್ತಾರೆ.

ವಚನ – 1

ಶಿವಯೋಗವಾದಲ್ಲಿ ಸಂಸಾರ ಯೋಗ ಯಾವುದಯ್ಯಾ
ಸಂಸಾರಯೋಗವಾದಲ್ಲಿ ಭಕ್ತಾನುಗ್ರಹಯೋಗವಯ್ಯಾ
ಭಕ್ತಾನುಗ್ರಹ ಯೋಗದಲ್ಲಿ ಲಿಂಗಾನುಗ್ರಹ ಯೋಗವಯ್ಯಾ
ಲಿಂಗಾನುಗ್ರಹಯೋಗದಲ್ಲಿ ಜಂಗಮಾನುಗ್ರಹಯೋಗವಯ್ಯಾ
ಜಂಗಮಾನುಗ್ರಹಯೋಗದಲ್ಲಿ ಪ್ರಸಾದಾನುಗ್ರಹಯೋಗವಯ್ಯಾ
ಪ್ರಸಾದಾನುಗ್ರಹಯೋಗದಲ್ಲಿ ತ್ರಿವಿಧಸಮತಯೋಗವಯ್ಯಾ
ತ್ರಿವಿಧ ಸನುಮತಯೋಗದಲ್ಲಿ ಮನಮಗ್ನ ಯೋಗವಯ್ಯಾ
ಮನಮಗ್ನ ಯೋಗವಾದಲ್ಲಿ "ಕೂಡಲ ಚೆನ್ನಸಂಗ'ನಲ್ಲಿ
"ಲಿಂಗ" ಸಂಯೋಗವಯ್ಯಾ,

–ಚೆನ್ನ ಬಸವಣ್ಣನವರು, ವಚನ 715 ಪುಟ 220 ಸ.ವ.ಸಂ.3 1993

ಲಿಂಗ: ಪಂಚ ಸಂಜ್ಞೆಗಳಿಂದ ಕೂಡಿದ ತತ್ತ್ವ (1)

ಸಾಧಕನು ತನ್ನ ಮನಸ್ಸನ್ನು ಶಿವನಲ್ಲಿ ಒಂದು ಮಾಡಬೇಕೆಂಬ ವಿಚಾರವೇ ಶಿವಯೋಗ ಮಾಡಬೇಕೆಂದು ಸಾಧಕನ ಇಚ್ಛೆಯಾಗಿದೆ. ಅಂದರೆ ಸಾಧಕನು ತನ್ನ ಮನತತ್ತ್ವವನ್ನು, ಸಾಧನೆಯ ಮೂಲಕ ಪ್ರಾಪಂಚಿಕ ಸಂಸಾರದಿಂದ ವಿಮುಖಗೊಳಿಸಿ, ಶಿವತತ್ತ್ವದ ಕಡೆಗೆ ಕೊಂಡೊಯ್ಯುವ ಇಚ್ಛೆಯೇ ಶಿವಯೋಗವಾಗುವ ವಿಚಾರವಾಗಿದೆ. ಈ ರೀತಿಯ ಶಿವಯೋಗವಾದಲ್ಲಿ ಸಾಧಕನಿಗೆ ಸಂಸಾರಯೋಗವಾಗುತ್ತದೆ. ಅಂದರೆ, ಸಾಧಕನಿಗೆ ಸಂಸಾರಯುತ ಪ್ರಪಂಚ ಪ್ರಜ್ಞೆಗಳಲ್ಲಿ ಆಸಕ್ತಿ ಉಂಟಾಗದೆ, ಶಿವತತ್ತ್ವದಲ್ಲಿ ಭಕ್ತನಾಗಿ, ಆಸಕ್ತಿ ಉಂಟಾಗುತ್ತದೆ. ಹೀಗೆ ಆಸಕ್ತಿ ಉಂಟಾದಾಗ ಭಕ್ತನಾದ ಸಾಧಕನು ಒಬ್ಬ ಗುರುವನ್ನು ಶಿವಸ್ವರೂಪದಲ್ಲಿ ಗ್ರಹಿಸಿ, ಅವನಿಂದ 'ದೀಕ್ಷೆ' ತೆರೆದು, ಇಷ್ಟಲಿಂಗವನ್ನು ಗುರುಸ್ವರೂಪದಿಂದ ತನ್ನ ಸಾಧನೆಗೆ ಪಡೆಯುತ್ತಾನೆ. ಇದು ಲಿಂಗಾನುಗ್ರಹಯೋಗವಾಗುತ್ತದೆ. ತದನಂತರದಲ್ಲಿ ಸಾಧಕನಾದ ಭಕ್ತನು ತನ್ನ ಇಷ್ಟಲಿಂಗೋಪಾಸನೆಯ ಮೂಲಕ ಜಂಗಮ ತತ್ತ್ವವನ್ನು ಅಂದರೆ, ಜೀವಾತ್ಮ ತತ್ತ್ವದಲ್ಲಿನ ಪರಮಾತ್ಮ ಅನುಸಂಧಾನವನ್ನು ಮಾಡುತ್ತಾನೆ. ಹೀಗೆ ಸಾಧಕನು ತನ್ನ 'ಮನ'ವನ್ನು ಸಾಧನೆಯಲ್ಲಿ ತೊಡಗಿಸಿಕೊಂಡು ಜೀವಾತ್ಮನಲ್ಲಿಯ ಪರಮಾತ್ಮ ಸ್ವರೂಪದ ಅನುಸಂಧಾನ ಮಾಡಿದಾಗ, ಅದು ಜಂಗಮಾನುಗ್ರಹ ಯೋಗವಾಗುತ್ತದೆ. ಈ ರೀತಿಯ ಸಾಧನೆಯಿಂದ ಸಾಧಕನಿಗೆ ಪರಮಾತ್ಮ ತತ್ತ್ವದ ಜ್ಞಾನವು ಉಂಟಾಗುತ್ತದೆ. ಈ ಪರಮಾತ್ಮ ತತ್ತ್ವದ ಜ್ಞಾನವೇ

ಸಾಧಕನಿಗೆ ಪ್ರಸಾದವಾಗಿದೆ. ಈ ರೀತಿಯ ಪ್ರಸಾದವಾದಾಗ ಸಾಧಕನಲ್ಲಿಯ ತ್ರಿವಿಧಗಳಾದ ಗುರು, ಲಿಂಗ, ಜಂಗಮತತ್ತ್ವಗಳಲ್ಲಿ; ಸಹಮತ ಉಂಟಾಗಿ, ಎಲ್ಲವೂ ಒಂದೇ ತತ್ತ್ವವಾದ ನಿಷ್ಕಲ ಪರಶಿವತತ್ತ್ವದಲ್ಲಿ ಮಗ್ನವಾಗುತ್ತದೆ. ಈ ಸ್ಥಿತಿಯೇ ಸಾಧಕನಿಗೆ 'ಮನಮಗ್ನಯೋಗ'ವಾಗಿದೆ. ಈ ರೀತಿಯಲ್ಲಿ 'ಮನಮಗ್ನ ಯೋಗ'ವಾದಾಗ ಸಾಧಕನಿಗೆ ನಿಷ್ಕಲ ಪರಮಾತ್ಮವಾದ ಕೂಡಲಚೆನ್ನಸಂಗನಲ್ಲಿ 'ಲಿಂಗ ಸಂಯೋಗವಾಗಿರುತ್ತದೆ'.

ಚಿತ್ರ:5 ಸಾಧಕನ ಆಧ್ಯಾತ್ಮ ವ್ಯಕ್ತಿತ್ವ

ಸಾಧಕನಾದ ಭಕ್ತನ ಮನತತ್ತ್ವವು; ಅವನಲ್ಲೇ ಇರುವ 'ಶಿವ'ತತ್ತ್ವದಲ್ಲಿ ಮಗ್ನವಾದಾಗ ಸಾಧಕನಿಗೆ ಭಕ್ತನಿಗೆ ಲಿಂಗಸಂಯೋಗವಾಗುತ್ತದೆ.

ಇಷ್ಟಲಿಂಗ ಅಥವಾ ಲಿಂಗ: ಇದು ಭಕ್ತನಾದವನಿಗೆ ಗುರು ಸ್ವರೂಪದಲ್ಲಿರುವ ಉಪಾಧಿಕ ಗುರುವಿನಿಂದ ದೀಕ್ಷೆಯ ಮುಖಾಂತರ ದೊರೆಯುವ ಸಾಧನೆಯ ಕುರುಹು. ಈ ಲಿಂಗವು ಪಂಚ ಸಂಜ್ಞೆಗಳಿಂದ ಕೂಡಿದೆ.

1) ಪರಶಿವ ಶಕ್ತಿಯ ನಿಜನಿವಾಸ (ಅಖಂಡ ಚೈತನ್ಯಾತ್ಮಕ ಶಕ್ತಿಯ ಸ್ಥಾನ)
2) ಪರಶಿವನ ಪರಮಜ್ಞಾನತೇಜ (ಪ್ರಜ್ಞೆ ಬುದ್ಧಾತ್ರಕಾಶತೆ)
3) ಅಖಂಡ ಸ್ವರೂಪ (ಸಂಪೂರ್ಣ, ಅವಿಚ್ಛನ್ನಸ್ವರೂಪ)
4) ಹರಿಬ್ರಹ್ಮರ ನಡುವೆಗಳ್ದ ಜ್ಯೋತಿರ್ಲಿಂಗ (ಹರಿ, ಬ್ರಹ್ಮರ ನಡುವೆ ತನ್ನಿಂದ ತಾನೇ ಆದ ಲಿಂಗ)
5) ಚರಾಚರಲಯಗಮನ ಸ್ಥಾನ (ಚರಾಚರಲಯಸ್ಥಾನ)
(ಇದಕ್ಕೆ ಆಧಾರ ಉರಿಲಿಂಗ ಪೆದ್ದಿಗಳ ವಚನ. "ಲಿಂಗವೆಂಬುದು ಪರಶಿವಶಕ್ತಿಯ ನಿಜನಿವಾಸ")

ಈ ಮೇಲಿನ ಪಂಚಸಂಜ್ಞೆಗಳಿಂದ 'ಲಿಂಗ'ವನ್ನು ಅಖಂಡ ಚೈತನನ್ಯಾತ್ಮಕ ಶಕ್ತಿಯೆಂದೂ, ಪ್ರಜ್ಞಾ ಸ್ವರೂಪವೆಂದೂ, ಪರಿಪೂರ್ಣ ಅಖಂಡವಾದ ಸ್ಥಿತಿಯೆಂದೂ, ಸಮಾಸ್ತ ಸೃಷ್ಟಿ ಉತ್ಪತ್ತಿಯಾಗಿ, ಲಯವಾಗುವ ಸ್ಥಾನವೆಂದೂ ತಿಳಿಯಬಹುದು. ಗುರುವಿನಿಂದ ದೀಕ್ಷೆಯ ಮುಖಾಂತರ ಪಡೆದ ಇಷ್ಟಲಿಂಗವು ಸಾಧಕನಿಗೆ ಲಿಂಗಾನುಗ್ರಹ ಯೋಗವಾಗಿದೆ. ಮತ್ತು ಆ 'ಲಿಂಗವು' ಪಂಚಸಂಜ್ಞೆಗಳಿಂದ ಕೂಡಿದೆ. ಈ ಇಡೀ ಸಾಧಕನ ದೇಹ 36 ತತ್ತ್ವಾಧಾರಿತ ಪ್ರಜ್ಞಾ ವಿಶೇಷಗಳಿಂದ ಕೂಡಿದೆ.

ಇಡೀ ಪ್ರಜ್ಞಾವಿಶೇಷಗಳು ಪ್ರಾಪಂಚಿಕ, ಅಪ್ರಾಪಂಚಿಕ (ಪ್ರಪಂಚಾತೀತ) ಎಂಬುವುಗಳಾಗಿ, ಒಟ್ಟು ಸ್ಪಷ್ಟವಾಗಿ 89 ಪ್ರಜ್ಞೆಗಳೆಂದು ತಿಳಿಯಲಾಗಿದೆ. ಈ 89 ಪ್ರಜ್ಞೆಗಳನ್ನು ಪ್ರಾಪಂಚಿಕವಾಗಿ **Sensual and desire sphere** ಗಳಾಗಿಯೂ, **fine material sphere** ಸಂಬಂಧಿತವಾಗಿಯೂ, ಮತ್ತು

ಪ್ರಪಂಚಾತೀತವಾಗಿ, **Immaterial sphere,** ಮತ್ತು **Sensual and desire sphere** ಸಂಬಂಧಿತವಾಗಿಯೂ ಇವೆ. ಈ ಪ್ರಜ್ಞಾ ವಿಶೇಷಗಳನ್ನು ಈ ಕೆಳಗಿನ ರೀತಿಯಲ್ಲಿ ತಿಳಿಯಲಾಗಿದೆ.

**ಚಿತ್ರ:6 ಸಾಧಕನ ಆಧ್ಯಾತ್ಮ ವ್ಯಕ್ತಿತ್ವ (ಪುಟ 8 ನೋಡಿ)**

ಸಾಧಕನಲ್ಲಿನ '36 ತತ್ತ್ವ' ಸ್ವರೂಪದಲ್ಲಿ ತತ್ತ್ವಗಳು, ನಾಲ್ಕು ವರ್ಗಗಳಲ್ಲಿ 89 ಪ್ರಜ್ಞಾವಿಶೇಷಗಳಾಗಿ ಸಾಧಕನ 'ಮನವು' ತೊಡಗಿಕೊಂಡಿರುತ್ತದೆ. ಇವುಗಳ ತಿಳುವಳಿಕೆ 'ಮನಮಗ್ನ' ಯೋಗದ ಸಾಧನೆಯಲ್ಲಿ ಸಾಧಕನಿಗೆ ಅತ್ಯಂತ ಸಹಾಯ ಮಾಡುತ್ತದೆ. ಪ್ರಾಪಂಚಿಕ ಪ್ರಜ್ಞಾ ವಿಶೇಷಗಳಲ್ಲಿ ಮನವನ್ನು ಸಾಧಕನು ತೊಡಗಿಸಿಕೊಳ್ಳದೆ ಪ್ರಪಂಚಾತೀತವಾದ ಪ್ರಜ್ಞೆಗಳಲ್ಲಿ ಸಾಧಕನು ತನ್ನ ಮನವನ್ನು ತೊಡಗಿಸಿಕೊಳ್ಳಬೇಕು.

ನಾಲ್ಕು ವರ್ಗಗಳ ಪ್ರಜ್ಞಾವಿಶೇಷಗಳು:

| | |
|---|---|
| **1) Sensual and desire sphere** | **(54 States)** |
| **2) Fine Material sphere** | **(15 States)** |
| **3) Immaterial sphere** | **(13 states)** |
| **4) Supra mundane sphere** | **(8 states)** |

**89 ಪ್ರಜ್ಞಾವಿಶೇಷಗಳು**

ಸಾಧಕನಲ್ಲಿನ ಈ ಪ್ರಾಪಂಚಿಕ, ಪ್ರಪಂಚಾತೀತ ಪ್ರಜ್ಞಾವಿಶೇಷಗಳ ವಿಚಾರದಲ್ಲಿ ಬಸವಣ್ಣನವರು ಸಾಧನ ವಿಚಾರದಲ್ಲಿ ಅದ್ಭುತವಾದ ಮಾಹಿತಿಯನ್ನು ತಿಳಿಸುತ್ತಾರೆ. (ಚಿತ್ರ 4, ಮತ್ತು ಚಿತ್ರ 6)

ವಚನ:

ಅಷ್ಟದಳ ಕಮಲನ ಸುತ್ತುವ ಜೀವಾತ್ಮನ ಮೆಟ್ಟಿದದಳವನರಿಯದೆ
ತಾನು ಭಕ್ತನೆಂತೆಂಬೆ, ಅನುಶಂಕರನೆಂತೆಂಬೆ, ಅನುಲಿಂಗೈಕ್ಯನೆಂತೆಂದೆ
ಕೂಡಲಸಂಗಮದೇವಾ, ಎನ್ನ "ಮನವು" ಸಮಾಧಾನವಾಗದನ್ನಕ್ಕ

ಬಸವಣ್ಣನವರು ವಚನ, 479, ಪುಟ 115, ಸ.ವ.ಸಂ.1 1993.

ಅನಾಹತ ಚಕ್ರ ಸ್ಥಾನವು ಹನ್ನೆರಡು ದಳ ಕಮಲವನ್ನು ಪ್ರತಿನಿಧಿಸುತ್ತದೆ. ಈ ಹನ್ನೆರಡು ದಳಗಳಲ್ಲಿ ಎಂಟು ದಳಗಳು ಅಧೋಮುಖವಾಗಿಯೂ, ಮೇಲುಮುಖವಾಗಿ ನಾಲ್ಕು ದಳಗಳು ಇವೆ. ಅಧೋಮುಖಿ ಎಂಟು ದಳಗಳಲ್ಲಿ ಅಷ್ಟದಳ) ಸಾಧಕನಾದ ಜೀವಾತ್ಮನು ತನ್ನ ಪ್ರಾಪಂಚಿಕ ವ್ಯವಹಾರ ಪ್ರಜ್ಞಾವಿಶೇಷಗಳಲ್ಲಿ ತನ್ನಮನವನ್ನು ತೊಡಗಿಸಿಕೊಂಡಿರುತ್ತಾನೆ. ಮೇಲಿನ ನಾಲ್ಕು ದಳಗಳಲ್ಲಿ ಪರಶಿವನ ಅತ್ಯಂತ ಸತ್ವಗುಣ ಪ್ರಧಾನವಾದ ಈಶ್ವರ ತತ್ತ್ವವು ಪ್ರತಿಷ್ಠಿತವಾಗಿರುತ್ತದೆ. ಸಾಧಕನ ಅಂತಃಕರಣ ಚತುಷ್ಟಯಗಳು (ಮನ, ಅಹಂಕಾರ, ಬುದ್ಧಿ, ಚಿತ್ತಗಳು ಶುದ್ಧವಾದ ಹಾಗೆ ಜೀವಾತ್ಮನ ಸ್ವರೂಪವು ತನ್ನಲ್ಲಿಯೇ ಇರುವ ಪರಮಾತ್ಮ ಸ್ವರೂಪವನ್ನು ಈಶ್ವರ ತತ್ತ್ವದ ಅನುಸಂಧಾನದಿಂದ ತಿಳಿದು, ಪರಿಪೂರ್ಣ ಪ್ರಮಾಣದ ಪರಮಾತ್ಮ ಸ್ವರೂಪವಾಗಲೂ ತನ್ನ ಸಾಧನೆಯನ್ನು ಭಕ್ತ, ಶರಣ, ಲಿಂಗೈಕ್ಯ ಸ್ಥಿತಿಗಳಲ್ಲಿ ಮುಂದುವರೆಸುತ್ತದೆ.

ಜೀವಾತ್ಮನ "ಪ್ರಜ್ಞಾ ವಿಶೇಷ" ಪ್ರಾಪಂಚಿಕ ಪ್ರಜ್ಞೆಗಳು ಕೆಳಗಿನ ಎಂಟು ವಿಭಾಗಗಳಲ್ಲಿ **1) Sensual and desire sphere** ಮತ್ತು **2) Fine Material sphere** ಪ್ರಜ್ಞಾವಿಶೇಷಗಳಾಗಿವೆ.

**1. Desire to do holy things (East)**
**2. Sleep, dullness, drowsiness, (south East)**
**3. Laziness Anger and Imelty (South)**
**4. Desire to do bad things (south west)**
**5. Happiness, joy, playfulness (west) lila**
**6. Movements (North west)**
**7. Desire for sensual Communion (North**
**8. Charity (North East)**

ಈ ಎಂಟು ರೀತಿಯಲ್ಲಿ **1) Sensual and desire sphere** ಪ್ರಜ್ಞೆಗಳು ಮತ್ತು **2) Fine Material sphere** ಪ್ರಜ್ಞೆಗಳು (ಒಟ್ಟು 69 ಪ್ರಜ್ಞಾ ವಿಶೇಷಗಳಾಗಿ) ಇವೆ.

ಇನ್ನೂ ಈ ಪ್ರಾಪಂಚಿಕ ಪ್ರಜ್ಞಾ ವಿಶೇಷಗಳನ್ನು ದಾಟಿ, ಸಾಧಕನು ಈಶ್ವರ ತತ್ತ್ವದ ಸಹಾಯದಿಂದ ಪ್ರಪಂಚಾತೀತ ಪ್ರಜ್ಞೆಗಳ ವ್ಯಾಪ್ತಿಗೆ ಕಾಲಿಡುತ್ತಾನೆ. ಪ್ರಪಂಚಾತೀತ ಪ್ರಜ್ಞೆಗಳು **Immaterial sphere** ಮತ್ತು **IV supra mundane sphere** ಪ್ರಜ್ಞಾ ವಿಶೇಷಗಳ ವ್ಯಾಪ್ತಿಗೆ ಬರುತ್ತವೆ. ಸಾಧಕನು ಈ ಪ್ರಜ್ಞಾಸ್ಥಿತಿಗಳಲ್ಲಿ ಶಿವಾತ್ಮಕನಾಗಿ ಸಹಜ, ಶರಣ ಸ್ಥಿತಿಯಾದ ಶಿವಯೋಗಿಯ ಸ್ಥಿತಿಯನ್ನು ಪಡೆಯುತ್ತಾನೆ.

ಸಾಧಕನ ಈ ಎಲ್ಲಾ ಪ್ರಜ್ಞಾ ವಿಶೇಷಗಳ ತಿಳುವಳಿಕೆ ಮತ್ತು ಸಾಧನೆ, ಷಟ್‌ಸ್ಥಲ ಸಿದ್ಧಾಂತದ ಹಿನ್ನೆಲೆಯಲ್ಲಿನ ಇಷ್ಟಲಿಂಗೋಪಾಸನೆಯ ನೆಲೆಯಲ್ಲಿ ನಡೆಯುತ್ತದೆ.

| ಲಿಂಗಸ್ಥಲ | ಲಿಂಗ ಸ್ಥಲ | ಚಕ್ರಗಳು | ಪ್ರಜ್ಞಾ ವಿಶೇಷಗಳು ಮತ್ತು ತತ್ತ್ವಗಳು ಹಾಗೂ (ವಿವಿಧ ರೀತಿಯವು) |
|---|---|---|---|
| ಐಕ್ಯ | ಸಹಜಲಿಂಗ | **10 ಅಣುಚಕ್ರ** | |
| | ನಿಃಶೂನ್ಯಲಿಂಗ | **9 ಪಶ್ಚಿಮ ಚಕ್ರ** | |
| | ಶೂನ್ಯಲಿಂಗ | **8 ಶಿಖಾ ಚಕ್ರ** | |
| | ನಿಷ್ಕಲಲಿಂಗ | **7 ಸಹಸ್ರಾರಚಕ್ರ** | ಪರಶಿವ |
| ಐಕ್ಯ | ಮಹಾಲಿಂಗ | ಅಜ್ಞಾಚಕ್ರ | ಶಿವ ಶಕ್ತಿ ಸದಾಶಿವ |
| ಶರಣ | ಪ್ರಸಾದಲಿಂಗ | 5. ವಿಶುದ್ಧಿ ಚಕ್ರ | ಈಶ್ವರ |
| ಪ್ರಾಣಲಿಂಗಿ | ಜಂಗಮಲಿಂಗ | 4. ಅನಾಹುತಚಕ್ರ | ಪ್ರಾಣ ಶಬ್ಧ ಸ್ಪರ್ಶ ರಸ ಗಂಧ ವಾಕ್ |
| ಪ್ರಸಾದಿ | ಶಿವಲಿಂಗ | ಮಣಿಪೂರಕಚಕ್ರ | |
| ಮಾಹೇಶ್ವರ | ಗುರುಲಿಂಗ | ಸ್ವಾಧಿಷ್ಠಾನಚಕ್ರ | |
| ಭಕ್ತ | ಆಚಾರಲಿಂಗ | ಆಧಾರಚಕ್ರ | |
| ಷಡುಸ್ಥಲ ಸಿದ್ಧಾಂತ ಲಿಂಗಸ್ಥಲ 47 ಸ್ಥಲಗಳು 101 ಸ್ಥಲಗಳು | | | |

ಚಿತ್ರ–7: ಷಡುಸ್ಥಲ ಸಿದ್ಧಾಂತ ಹಾಗೂ ತತ್ತ್ವಗಳು ಮತ್ತು 89 ಪ್ರಜ್ಞಾ ವಿಶೇಷಗಳು:–

ಮೇಲಿನ ವಚನ (2)ರಲ್ಲಿ ಬಸವಣ್ಣನವರು ಭಕ್ತ, ಶರಣ, ಲಿಂಗೈಕ್ಯವೆಂದು ಷಡುಸ್ಥಲಗಳಲ್ಲಿ, ಭಕ್ತ, ಶರಣ, ಐಕ್ಯ ಸ್ಥಲವನ್ನೂ ಮಾತ್ರ ಸೂಚ್ಯ ಮಾಡಿದ್ದಾರೆ. ಆದರೆ, ಮಾಹೇಶ್ವರ ಪ್ರಸಾದಿ, ಪ್ರಾಣಲಿಂಗಿ ಸ್ಥಲಗಳನ್ನು ತಮ್ಮ ವಚನದಲ್ಲಿ ಸೂಚ್ಯಮಾಡಿದ್ದಾರೆ. ಇದಕ್ಕೆ ಒಂದು ಪ್ರಭಲವಾದ ಕಾರಣವಿದೆ. ಶರಣಸ್ಥಲದವರೆವಿಗೂ ಪಂಚಭೂತಾತ್ಮಕ ತತ್ತ್ವಗಳ ಸಹವಾಸ ಸಾಧಕನಿಗೆ ಇದ್ದೇ ಇರುತ್ತದೆ. ಆದರೆ, ಶರಣಸ್ಥಲ ಸಾಧಕನಿಗೆ ಕೇವಲ ಆಕಾಶ ತತ್ತ್ವದ ತತ್ತ್ವಗಳಾದ ಚಿತ್ತ, ಬುದ್ಧಿ, ಅಹಂಕಾರ, ಮದ, ಜ್ಞಾತೃಗಳು ಮಾತ್ರವಿರುತ್ತವೆ. ಅದರ ಮೇಲೆ ಕೇವಲ ಆಕಾಶತತ್ತ್ವ ಮಾತ್ರವಿರುತ್ತದೆ. ಈ ಕಾರಣಗಳಿಗಾಗಿ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಸ್ಥಲಗಳ ತತ್ತ್ವಗಳ ವಿಚಾರ ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿಲ್ಲ. ಆ ಆಧಾರದಲ್ಲಿ ಅವೆಲ್ಲಾ ಒಂದೇ ರೀತಿ ಇವೆ.

'ಲಿಂಗ'ವನ್ನು ಪರಶಿವ ಶಕ್ತಿಯ ನಿಜನಿವಾಸವೆಂದು ಪ್ರಮುಖವಾಗಿ ತಿಳಿಯಲಾಗಿದೆ. ಲಿಂಗತತ್ತ್ವವು ಶಿವ–ಭಕ್ತಿ ಸಂಪುಟವನ್ನು ಪ್ರತಿಪಾದಿಸುತ್ತಿದೆ. ಶಿವ–ಶಕ್ತಿ ಎರಡು ತತ್ತ್ವಗಳು ಅವಿನಾಭಾವ ಸಂಬಂಧದಿಂದ ನಿರಂತರವಾಗಿ ಇರುತ್ತದೆ. ಈ ಶಿವ–ಶಕ್ತಿ ತತ್ತ್ವಗಳ ಅಖಂಡ ಚೈತನ್ಯಾತ್ಮಕ ಶಕ್ತಿ"ಯ ಪ್ರತೀಕವೇ ಲಿಂಗತತ್ತ್ವವೇ ಆಗಿದೆ. ಇದು ಪ್ರಜ್ಞಾ ಸ್ವರೂಪಗಳಲ್ಲೂ ಸಹ ಇವೆ. ಕಾರಣ ಲಂಗ ತತ್ತ್ವವು ಪರಶಿವನ ಪರಮ ಜ್ಞಾನ ತೇಜವೂ ಸಹ ಆಗಿದೆ.

ಈ ಎರಡೂ ಸಂಜ್ಞೆಗ್ಗಳಿಂದ 'ಶಿವ–ಶಕ್ತಿ' ಸಂಪುಟವನ್ನು ಸಾಧಕನು ತನ್ನ ಅನುಭವದಿಂದ ಗುರುತಿಸಬಹುದು. ಮೊದಲನೆಯ ಸಂಜ್ಞೆ ಶಕ್ತಿಯಿಂದ ಚೈತನ್ಯವನ್ನು ಮತ್ತು ಎರಡನೆಯ ಸಂಜ್ಞೆ ಪ್ರಜ್ಞೆಯಿಂದ, ವಿವರಗಳನ್ನು

ತಿಳಿದು ಅವುಗಳು ಒಂದೇ ಇರುವ ಶಿವ ಸ್ವರೂಪದ ಅಖಂಡ ಚೈತನ್ಯವನ್ನು ಗುರುತಿಸಿ, ಅದೇ ಆಗಬಹುದು. ಇದು ಮನಮಗ್ನ ಯೋಗ'ದ ಸೂತ್ರವಾದ ಸಾಧನಮಾರ್ಗವಾಗಿದೆ.

ಈ ವಿಚಾರದಲ್ಲಿ ಸಾಧಕನಲ್ಲೇ ಇರುವ 'ಸಪ್ತ ಪ್ರಮಾತೃ' ವರ್ಗವು ಸಾಧಕನಿಗೆ ಶಕ್ತಿಗಳ ಹಿಂದಿರುವ ಚೈತನ್ಯವನ್ನಾಗಲೀ, ಪ್ರಜ್ಞೆಗಳ ಹಿಂದಿರುವ ಚೈತನ್ಯವನ್ನಾಗಲೀ, ಗುರುತಿಸುವ ಕ್ರಿಯೆಗಳಲ್ಲಿ ಸಾಧ್ಯತೆಗಳಿವೆ. ಪ್ರಮಾತೃವೆಂದರೆ, ಸ್ವಯಂ ಪ್ರಕಾಶವಾದ ತಿಳಿಯುವ ಶಕ್ತಿ, ಇದು ಸಾಧಕನಲ್ಲೆ ಇರುವ ಸಾಮರ್ಥ್ಯವಾಗಿದೆ. ಈ ಸಪ್ತಪ್ರಮಾತೃಗಳು, ಶಕ್ತಿತತ್ತ್ವದ ಭೇದಗಳೂ ಹಾಗೂ **89** ಪ್ರಜ್ಞಾ ವಿಶೇಷಗಳೂ, **36** ತತ್ತ್ವಗಳೂ ಇವುಗಳಲ್ಲಿನ ಪರಸ್ಪರ ಸಂಬಂಧವನ್ನು ಈ ಕೆಳಗಿನ ಚಿತ್ರ–8 ರಲ್ಲಿ ಪ್ರಚಾರಿಸಲಾಗಿದೆ.

ಶಿವ

ಶಕ್ತಿ

ಸದಾಶಿವ

ಈಶ್ವರ

ಶುದ್ಧ ವಿದ್ಯಾ

ಮಾಯಾ

ಕಲಾ

ಅವಿದ್ಯಾ

ರಾಗ

ಕಾಲ

ನಿಯತ

ಜ್ಞಾತೃ

ಮನ

ಅಹಂಕಾರ

ಬುದ್ಧಿ

ಪ್ರಾಣ

ಜ್ಞಾನ

ಸಮಾನ

ಶ್ಲೋಕ

ನೇತ್ರ

ಪ್ರಾಣ

ಶಬ್ಧ ವಾಕ್

ಸ್ಪರ್ಶ ಪಾಣಿ

ರೂಪ ಉಪಸ್ಥ

ರಸ ವಾಯು

ಗಂಧ

ಪರಪ್ರಮಾತೃ

ಪ್ರಸಾದಿ ಜ್ಞಾನಶಕ್ತಿ

ಈ ಸಪ್ತ ಪ್ರಮಾತೃ ವರ್ಗಗಳಲ್ಲಿ ಸಾಧಕನು ತನ್ನ ಸಾಧನೆಯನ್ನು ಕೊಡಬೇಕು. ಮನಮಗ್ನಯೋಗದಲ್ಲಿ ಪ್ರತಿಯೊಂದು ಪ್ರಮಾತೃ ವರ್ಗವೂ ಗ್ರಾಹಕಾಂಶವಾಗಿ ಅಯಾಯ ಪ್ರಮಾತೃ ವರ್ಗದ. ಶಕ್ತಿ ಮತ್ತು ಪ್ರಜ್ಞೆಗಳ ಮೂಲಕ ಚೈತನ್ಯಾತ್ಮಕ ಶಿವನನ್ನು ದರ್ಶಿಸಿ, ಕಡಿಮೆ ಮಾಡಿಕೊಳ್ಳಬೇಕು.

ಚಿತ್ರ:9 ಗ್ರಾಹಕಾಂಶ ಮತ್ತು ಗ್ರಾಹ್ಯಾಂಶಗಳು
ಮತ್ತು ಸಪ್ತ ಪ್ರಮಾತೃ ವರ್ಗ "ಮನಮಗ್ನ ಯೋಗ'ದ ಸಾಧನ ಮಾರ್ಗ

| ಸತ್ತಪ್ರಮಾತೃವರ್ಗ | 36 ತತ್ವಗಳು | ಪ್ರಜ್ಞೆಗಳು ಶಕ್ತಿಗಳು | ಗ್ರಾಹಕಾಂಶ ಗ್ರಾಹ್ಯಾಂಶ |
|---|---|---|---|
| 1 ಸಕಿಲಾಕಿಲ ಪ್ರಮಾತೃ ವರ್ಗ ಮಿತ ಪ್ರಮಾತೃ<br>2. ಪ್ರಳಯಾಂತಪ್ರಮಾತೃ (ಶೂನ್ಯಪ್ರಮಾತೃ)<br>3. ವಿಜ್ಞಾನಾಕಲ ಪ್ರಮಾತೃ<br>4. ಮಂತ್ರಪ್ರಮಾತೃ | ಕಲಾತತ್ವವಾದ ಪ್ರಾಮುಖ ತತ್ತ್ವದವರೆಗಿನ 31 ತತ್ತ್ವಗಳು (ಚಿತ್ತ) (ಜೀವಾತ್ಮಸ್ಥಿತಿ) | 69 ಪ್ರಜ್ಞೆಗಳು ಕ್ರಿಯಾಶಕ್ತಿ ಜ್ಞಾನ ಶಕ್ತಿ, ಇಚ್ಛಾಶಕ್ತಿ, ಆನಂದಶಕ್ತಿ, | ಭೇದ ಜ್ಞಾನಗಳು<br><br>ಗ್ರಾಹ್ಯಾಂಶ ಜಾಸ್ತಿ ಗ್ರಾಹಕಾಂಶಕ |
| 6. ಮಂತ್ರೇಶ್ವರ ಪ್ರಮಾತೃ | ಈಶ್ವರ ತತ್ತ್ವ<br>ಸದಾಶಿವ ತತ್ತ್ವ | 12 ಪ್ರಜ್ಞೆಗಳು ಆದಿಶಕ್ತಿ | ಗ್ರಾಹಕಾಂಶ ಗ್ರಾಹ್ಯಾಂಶ ಸಮಸಮ |
| 7. ಪರತ್ರಮಾತೃ | ಲಿಂಗ ಶಿವತತ್ತ್ವ (ಶಿವಾತ್ಮಕ ಸ್ಥಿತಿ) (ಚಿತ್) | 8 ಪ್ರಜ್ಞೆಗಳು ಚಿಚ್ಛಕ್ತಿ | ಗ್ರಾಹಕಾಶ<br>ಗ್ರಾಹ್ಯಾಂಶಗಳು ಇಲ್ಲ |

ವಿಜ್ಞಾನಾಕಲ ಪ್ರಮಾತೃ:

ಗ್ರಾಹ್ಯಾಂಶ: ಭೋಕ್ತೃ
ಗ್ರಾಹಕಾಶ: ಪ್ರಮೇಯ; ಭೋಜ್ಯ

ಶುದ್ಧ ವಿದ್ಯಾತತ್ತ್ವದ ಕೆಳಗೆ ಮಾಯಾ ತತ್ತ್ವದ ಮೇಲೆ ಒಂದು ಅಂತರ ಪರಿಸ್ಥಿತಿ ಇದೆ. ಇಲ್ಲಿರುವ ಪ್ರಮಾತೃಕಕ್ಕೆ ವಿಜ್ಞಾನಕಲವೆಂದು ಹೆಸರು. ಇವರಿಗೆ ಶುದ್ಧವಾದ ಜ್ಞಾನವಿರುತ್ತದೆ. ಕತಿಕೃತ್ವವಿಲ್ಲ. ಪೂರ್ವದಲ್ಲಿ ಇವರಿಗೆ ಪರಿಚಿತರಾಗಿದ್ದ 'ಸಕಲಾಕೃತ್ರಮಾತ್ರಾ ವಸ್ಥೆಯಲ್ಲಿಯೂ, ಪ್ರಳಯಕಲಾತ್ಮಕಕಾವಸ್ಥೆಯಲ್ಲಿಯೂ ಪ್ರಮುಖವಾಗಿದ್ದ ವಿಶ್ವವೂ ಇವರಿಗೆ ವಿಭಿನ್ನವಾಗಿ ಈಗಲೂ ಗ್ರಾಹ್ಯವಾಗಿರುತ್ತದೆ. ಬುದ್ದಾವಸ್ಥೆಯಿಂದ ಉನ್ನತಿಯನ್ನು ಪಡೆಯುತ್ತಾ ಬಂದಿರುವುದರಿಂದ ಹಿಂದಿನ ಅವಸ್ಥೆಯಲ್ಲಿ ಪರಿಚಿತವಾಗಿದ್ದ ವಿಶ್ವವು ಪ್ರಮೇಯವಾಗಿರುತ್ತದೆ.

3. ಮನಮಗ್ನ ಯೋಗದ ಸಾಧನ ಮಾರ್ಗ:–

ಸಾಧಕನು ತನ್ನಲ್ಲಿಯ ಪ್ರಮಾತೃ ವರ್ಗದ ಸಹಾಯದಿಂದ ಈ ಪ್ರಮೇಯ ಸ್ವರೂಪ ಪ್ರಪಂಚವನ್ನು ಗ್ರಾಹ್ಯಾಂಶವಾಗಿ ತಿಳಿದು. ಅದರ ಹಿನ್ನೆಲೆಯ ತತ್ತ್ವಗಳಲ್ಲಿನ ಶಕ್ತಿ, ಹಾಗೂ ಪ್ರಜ್ಞೆ ಅಥವಾ ಎರಡೂ ನೆಲೆಯಲ್ಲಿ ಪ್ರಮೇಯಸ್ವರೂಪವನ್ನು ಅರ್ಥೈಸಿ, ಎಲ್ಲದರ ಹಿಂದೆ ಇರುವ "ಚೈತನ್ಯಾತ್ಮಕ ಶಕ್ತಿ"ಯನ್ನು (ಶಿವ–ಶಕ್ತಿ ಸಂಪುಟ)

ಪರಿಚಯ ಮಾಡಿಕೊಂಡು ಅದೇ ಆಗುವ ಸ್ಥಿತಿಯನ್ನು "ಪರತ್ರಮಾತೃ" ವರ್ಗದಲ್ಲಿ ಪಡೆಯುತ್ತಾನೆ.

ಈ ವಿಶ್ವ ಸ್ವರೂಪ ಪ್ರಮೇಯಗಳು, ನಾದ ಬಿಂದು ಕಳಾತ್ಮಕವಾಗಿ ನಾಮ ರೂಪರಾತ್ಮಕವಾಗಿದೆ. ಈ ನಾದವೇ ಚೈತನ್ಯ ಸ್ವರೂಪ. ಬಿಂದುವೇ ಸಾಖ್ಯಗಳು ಮತ್ತು ಕಳೆಯು ರೂಪಾತ್ಮಕವಾಗಿದೆ.

ಸಾದಾಖ್ಯಗಳು: ಶಿವಸಾರಾಖ್ಯ, ಅಮೂರ್ತ ಸಾದಾಖ್ಯ, ಮೂರ್ತ ಸಾದಾಖ್ಯ, ಕರ್ತೃ ಸಾದಾಖ್ಯ ಕರ್ಮಸಾದಾಖ್ಯ, ಎಂದು ಐದು ಸಾದಾಖ್ಯಗಳಿವೆ.

ಕಳೆಗಳು: ಶಾಂತ್ಯಾತೀತಕಳೆ, ಶಾಂತಕಳೆ, ವಿದ್ಯಾಕಳೆ, ಪ್ರತಿಷ್ಟಕಳೆ, ನಿವೃತ್ತಿಕಳೆ, ಎಂದು ಐದು ಕಳೆಗಳು ಆಗಿವೆ.

ಶಕ್ತಿಗಳು: ವಿಚ್ಚಕ್ತಿ, ಆದಿಶಕ್ತಿ (ಅನಂದಶಕ್ತಿ) ಇಚ್ಚಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬುದೇ ಶಕ್ತಿಗಳಾಗಿವೆ.

ಚಿತ್ರ:9 ಮನಮಗ್ನ ಯೋಗದಲ್ಲಿನ ಶಕ್ತಿಗಳು, ಕಳೆಗಳು, ಸಾದಾಖ್ಯಗಳು

| ಸಾಕಾರ ಶಕ್ತಿಗಳು | ಕಳೆಗಳು (ಕಲೆಗಳು) ಕಲಾತತ್ತ್ವ (ಕಳೆ) | ಸಾದಾಖ್ಯಗಳು ಇವು ಸಾದಾಶಿವ ತತ್ತ್ವವಾಗಿದೆ. (ಬಿಂದು) |
|---|---|---|
| ಚಿಚ್ಚಕ್ತಿ | ಶಾಂತ್ಯಾತೀತ ಕಳೆ | ಶಿವಸಾದಾಖ್ಯ |
| ಆದಿಶಕ್ತಿ (ಆನಂದಶಕ್ತಿ) | ಶಾಂತಿಕಳೆ | ಅಮೂರ್ತಸಾದಾಖ್ಯ |
| ಇಚ್ಚಾಶಕ್ತಿ | ವಿದ್ಯಾಕಳೆ | ಮೂರ್ತಸಾದಾಖ್ಯ ಈಶ್ವರ, ಜೀವಾತ್ಮ |
| ಜ್ಞಾನ ಶಕ್ತಿ | ಪ್ರತಿಷ್ಠಾಕಳೆ | ಕರ್ತೃಸಾದಾಖ್ಯ |
| ಕ್ರಿಯಾಶಕ್ತಿ | ನಿವೃತ್ತಿಕಳೆ | ಕರ್ಮಸಾದಾಖ್ಯ |

ನಾದ ಬಿಂದು ಕಳಾತ್ಮಕವಾದ್ದು ನಾಮರೂಪವಾಗಿದ್ದು ಜಗತ್ತು ಇದಕ್ಕೆ ಅತೀತವಾದದ್ದು, ಇದಕ್ಕೆ (ಅತೀತವಾದದ್ದು, ಶಿವ–ಶಕ್ತಿ) ತತ್ತ್ವ ಸಾಧಕನು ಪ್ರಪಂಚದ ಪ್ರಮೇಯಗಳಲ್ಲಿ ಕಳೆಗಳ ಮೂಲ. ಸಾದಾಖ್ಯ ಹಾಗೂ ಶಕ್ತಿಗಳನ್ನು ಗುರುತಿಸಿ, ಅದರ ಹಿಂದೆ, ಬರುವ ಪ್ರಜ್ಞೆಗಳನ್ನಾಗಲಿ ಅಥವಾ ಪಜ್ಞೆಗಳ ಹಿನ್ನೆಲೆಯಲಿಲ ಶಕ್ತಿ, ಕಳೆ, ಸಾದಾಖ್ಯಗಳನ್ನು ಪ್ರಮುಖ ಪ್ರಮೇಯಗಳಲ್ಲಿ ಗುರುತಿಸಿ, ಆ ಪ್ರಮೇಯಗಳ ಹಿನ್ನೆಲೆಯಲ್ಲಿನ "ಚೈತನ್ಯ"ವನ್ನು ಗುರುತಿಸುವ ಕ್ರಮವೂ ಸಹ ಸಿಂಧುವಾಗಿದೆ. ಪ್ರಮುಖವಾಗಿ ಸಾಧಕನು 'ಶಕ್ತಿ'ಯ ಹಿನ್ನೆಲೆಯಲ್ಲಾಗಲೀ ಅಥವಾ ಪ್ರಜ್ಞೆಗಳ ಹಿನ್ನೆಲೆಯಲ್ಲಾಗಲೀ, ಕಳೆ, ಸಾದಾಖ್ಯಗಳನ್ನು ಗುರುತಿಸಿ, ಅವುಗಳಲ್ಲಿನ "ಚೈತನ್ಯ"ವನ್ನು ಗುರುತಿಸುವುದೇ "ಮನಮಗ್ನಯೋಗ" ವಾಗಿದೆ. ಆ ಚೈತನ್ಯದ ಗುರುತಿಸುವಿಕೆಯಿಂದ ತನ್ನಿಂದ ತಾನೇ ಸಾಧಕನು ಆ ಚೈತನ್ಯವೇ ಆಗುವ ಸಂದರ್ಭಗಳು ಉಂಟಾಗುವತ್ತವೆ. ಇದೇ ಸಾಕಾರದಿಂದ,

ನಿರಾಕಾರಸ್ಥಿತಿ ತಲುಪುವುದು ಆಗಿದೆ. ಈ ನಿರಾಕಾರವೂ ಸಹ ಚೈತನ್ಯಾತ್ಮಕ ಶಕ್ತಿ ಸ್ವರೂಪವಾಗಿ ಅದರಲ್ಲಿನ ಚೈತನ್ಯ ಸ್ವರೂಪವು ಅಖಂಡವಾಗಿದ್ದು, ಅದರಲ್ಲಿನ ಶಕ್ತಿಯೂ ಯಾವುದೇ ವೈಷಮ್ಯಗಳಿಲ್ಲದ ಸಮಸ್ಥಿತಿಯಲ್ಲಿರುತ್ತದೆ.

**ಚೈತನ್ಯ : Capacity to bear ಎಲ್ಲವನ್ನೂ ಹೊರುವ ಸಾಮರ್ಥ್ಯ – ಶಿವ**

**ಶಕ್ತಿ : Capacity to function ಎಲ್ಲವನ್ನೂ ಹೊರುವಿಕೆ – ಶಕ್ತಿ**

****************************************